# ಅಪರಂಜಿ

ಸಂಪುಟ ೧೧ ಏಪ್ರಿಲ್ ೧೯೯೪ ಸಂಚಿಕೆ - ೭

ಗೌರವ ಸಲಹೆಗಾರರು:
ಶ್ರೀ ಅ.ರಾ. ಸೇ.
ಶ್ರೀ ಶೇಷಗಿರಿ

ಸಂಪಾದಕ:
ಶಿವಕುಮಾರ್

ಚಂದಾ ವಿವರ:
ಬಿಡಿ ಪ್ರತಿ:
2ರೂ 50 ಪೈ.

ವಾರ್ಷಿಕ ಚಂದಾ:
25ರೂ.

ಆಜೀವ ಚಂದಾ:
250 ರೂ.

ಯುಗಾದಿ ವಿಶೇಷಾಂಕ:
12ರೂ.

ವಿಳಾಸ:
ಅಪರಂಜಿ ಕಾರ್ಯಾಲಯ
36, 6ನೆಯ ಮುಖ್ಯ ರಸ್ತೆ
ಮಲ್ಲೇಶ್ವರಂ
ಬೆಂಗಳೂರು - 560 003

ಕೆಲಸದ ವೇಳೆ:
ಬೆಳಗ್ಗೆ 8ರಿಂದ
10 ಗಂಟೆಯವರೆಗೆ

## ಯುಗಾದಿ ಸಂಚಿಕೆ

ಇಂದು ಶ್ರೀಭಾವ ಸಂವತ್ಸರದ ಪ್ರಾರಂಭ. ಈ ಶುಭ ದಿನದಂದು ಅಪರಂಜಿ ಬಳಗದ ಎಲ್ಲ ಓದುಗರಿಗೂ, ಲೇಖಕ, ಲೇಖಕಿಯರಿಗೂ ಹಿತೈಷಿಗಳಿಗೂ ಭಗವಂತನು ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಅಪರಂಜಿ ಪ್ರಾರ್ಥಿಸುತ್ತಾಳೆ. ಈ ಸಂಚಿಕೆಗೆ ಬರಹಗಳನ್ನು ನೀಡಿ ಅನೇಕ ಹೊಸ ಲೇಖಕರು ನಮ್ಮ ಬಳಗವನ್ನು ಸೇರಿದ್ದಾರೆ. ಇವರೆಲ್ಲರಿಗೂ ಅಪರಂಜಿಯ ಹೃದಯ ತುಂಬಿದ ಸ್ವಾಗತ. ಎಂದಿಗಿಂತ ಹೆಚ್ಚು ಮೈ ತುಂಬಿ, ನೂರ ಅರವತ್ತು ಪುಟಗಳಲ್ಲಿ ನಗೆ ಚಿಮ್ಮಿಸುತ್ತಾ ಈ ಬಾರಿ ಅಪರಂಜಿ ನಿಮ್ಮಲ್ಲಿಗೆ ಬಂದಿದ್ದಾಳೆ. ಅನೇಕ ಸಹೃದಯರ ಉತ್ಸಾಹ, ಸಡಗರ ಇದಕ್ಕೆ ಕಾರಣ. ಮೊದಲಿಗೆ ಶ್ರೀ ಎ.ಆರ್. ರಾಜಗೋಪಾಲ್ ಅವರು ಜಾಹಿರಾತುಗಳನ್ನು ಹೊಂದಿಸುವ ಹೊಣೆಯನ್ನು ಬಹು ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಇವರಿಗೆ ಮತ್ತು ಈ ಕೆಲಸದಲ್ಲಿ ಸಹಾಯ ನೀಡಿದ ಶ್ರೀ ಪಿ.ಡಿ. ರವೀಂದ್ರ, ಮಂಜುನಾಥ್ ಮತ್ತು ಇತರ ಅನೇಕ ಗೆಳೆಯರಿಗೆ ಅಪರಂಜಿ ಆಭಾರಿ. ಕರಡು ತಿದ್ದುವುದು, ಎಂದಿಗೂ ತಾಳ್ಮೆಯನ್ನು ಪರೀಕ್ಷಿಸುವ ಕೆಲಸ, ಈ ಕಾರ್ಯವನ್ನು ಸ್ವ ಸಂತೋಷದಿಂದ, ಬಹು ಅಚ್ಚುಕಟ್ಟಾಗಿ ನಿರ್ವಹಿಸಿರುವ ಶ್ರೀ ಪಿ.ಎಮ್.ಎನ್. ಮೂರ್ತಿ ಅವರಿಗೆ ನಮ್ಮ ಧನ್ಯವಾದಗಳು. ಒಮೇಗಾ ಲೇಸರ್‌ನ ಆಚಾರ್ಯ, ರವಿ ಹಾಗೂ ಇಂಪ್ರೆಷನ್ಸ್‌ನ ನಾಥ್, ಈ ಉತ್ಸಾಹೀ ತರುಣರು ನಗೆ ಸಾಹಿತ್ಯದ ಬಗ್ಗೆ ಅಭಿಮಾನವುಳ್ಳವರು

ಹಾಗೂ ಈ ಸಂಚಿಕೆ ಸಕಾಲಕ್ಕೆ ಸರ್ವಾಂಗ ಸುಂದರವಾಗಿ ಮುದ್ರಿತವಾಗಿ ಹೊರಬರಲು ಮುಖ್ಯಕಾರಣರು. ಮನೆಯವರೇ ಆದ ಇವರಿಗೆ ನಮ್ಮ ಕೃತಜ್ಞತೆಗಳು ಅಂದರೆ ಈ ತರುಣರು ಕೋಪಿಸಿಕೊಂಡಾರು! ಎಲ್ಲ ಲೇಖಕ, ಲೇಖಕಿಯರು ಸಮಯಕ್ಕೆ ಮುಂಚಿತವಾಗಿಯೇ ಸಾಮಗ್ರಿ ಒದಗಿಸಿ, ಅಪರಂಜಿಯ ಮೇಲಣ ತಮ್ಮ ಅಭಿಮಾನ, ಮಮತೆ ಸೂಚಿಸಿದ್ದಾರೆ. ಈ ಎಲ್ಲ ಅಂಕಲ್, ಆಂಟಿಯರಿಗೆ ಅಪರಂಜಿಯ Smiling Thanks!

ಪ್ರಸಕ್ತ ವಿನೋದ ಸಾಹಿತ್ಯದಲ್ಲಿ ಪ್ರಬುದ್ಧತೆ ಎಂಬ ವಿಷಯವನ್ನು ಕುರಿತು ನಮ್ಮ ಬಳಗದ ಶೀನೂ ಅವರು ಒಂದು ಗಂಭೀರ ಪ್ರಬಂಧ ಮಂಡಿಸುವವರಿದ್ದರು. ಅದನ್ನು ಅಲ್ಲಿಗೇ ತಡೆದು ನಾನು ನಾಡಿನ ಎಲ್ಲ ಓದುಗರ ಕೃತಜ್ಞತೆಗೆ ಪಾತ್ರನಾಗಿದ್ದರೂ, ಅವರ ವಿಚಾರಧಾರೆಯ ಗುಂಗಿನಿಂದ ನಾನಿನ್ನೂ ಮುಕ್ತನಾಗಿಲ್ಲ. ಈ ಸಂಚಿಕೆಯ ಲೇಖನಗಳಲ್ಲಿ ಹಾಸ್ಯದೊಂದಿಗೆ, ಇನ್ನಾವುದಾದರೂ ಮೌಲ್ಯಗಳು ಕಂಡು ಬಂದರೆ (ಲೆನ್ಸ್ ಬಳಸಬಹುದು!) ದಯವಿಟ್ಟು ತಿಳಿಸಿ. ವಿನೋದ ಸಾಹಿತ್ಯ ಪ್ರಕಾರಕ್ಕೆ ಹೊಸದೊಂದು ಆಯಾಮ ದೊರಕಿಸುವ ಹೆಣಗಾಟವನ್ನು ಈ ಸಂಚಿಕೆಯಲ್ಲಿ ಬಹುತೇಕ ಲೇಖಕ/ಲೇಖಕಿಯರು ಯತ್ನಿಸಿದ್ದಾರೆ. ನಿಮ್ಮ ಪ್ರಾಮಾಣಿಕ ಪ್ರೌಢ ಪ್ರತಿಕ್ರಿಯೆಯ ಹತಾರದ ನೆರವಿಲ್ಲದೇ ಈ ಯತ್ನ ಬರಿಯ ಗಾಳಿ ಗುದ್ದಾಟವಾದೀತು. ಈ ಸಂಚಿಕೆಯ ಲೇಖನಗಳ ಬಗ್ಗೆ ಅಭಿಪ್ರಾಯ ತಿಳಿಸಿ ಬರೆದ ಮೊದಲ ಹತ್ತು ಮಂದಿಗೆ ಅಪರಂಜಿಯ ಒಂದು ವರ್ಷದ ಚಂದಾವನ್ನು ಉಚಿತವಾಗಿ ನೀಡಲಾಗುವುದು. ಆ ಮಹನೀಯರು ಈಗಾಗಲೇ ಚಂದಾದಾರರಾಗಿದ್ದರೆ, ಈ ಚಂದಾವನ್ನು ಅವರು ಉಡುಗೊರೆಯಾಗಿ ತಮ್ಮ ಮಿತ್ರರಿಗೆ ಕಳುಹಿಸಬಹುದು.

ಶುಭ ಹಾರೈಕೆಗಳೊಂದಿಗೆ,

**ಶಿವಕುಮಾರ್**

---

ಮುದ್ರಣ: ಇಂಪ್ರೆಷನ್ಸ್, ರಾಜಾಜಿನಗರ ಬೆಂಗಳೂರು
ಫೋನ್: 3355536

ಡಿ.ಟಿ.ಪಿ.: ಒಮೆಗಾ ಲೇಸರ್‌ಟೆಕ್
ಫೋನ್: 2225633

# ಈ ಸಂಚಿಕೆಯಲ್ಲಿ


| ಲೇಖನ ಲೇಖಕಿ/ಲೇಖಕ | | ಪುಟ |
|---|---|---|
| ಅಪರಂಜಿ ಕಿಡಿ | ಪ್ರಕಾಶ್ | 9 |
| ಓಡು ನೀ ಬಲು ದೂರಕೆ | ಅರುಣಾ ಆರ್. ಕಾರಂತ | 11 |
| ವಾರ್ಷಿಕೋತ್ಸವ ಭಾಷಣಗಳು | ಭುವನೇಶ್ವರಿ ಹೆಗಡೆ | 13 |
| SHAಡೋ CAಬಿನೆಟ್ | ಕೇಫ | 17 |
| ಬಸ್ಸಿನಲ್ಲಿ ಫಿಸಿಯೋಥಿರೆಪಿ | ಎಸ್.ಎನ್. ಶಿವಸ್ವಾಮಿ | 25 |
| ಜಲಂಧರದಲ್ಲಿ ಜಲಜಾಕ್ಷಿ | ನಂದಿನಿ ಕಾಪಡಿ | 31 |
| ಹೊಸ ವರುಷ – ಹೊಸ ಹರುಷ | ಸೀ. ಆರ್. ಸತ್ಯ | 35 |
| ನೀನಾರಿಗಾದೆಯೋ ಎಲೆ ಮಾನವ? | ಪೀಪಿ | 39 |
| ಬದುಕಲು ಕಲಿಯಿರಿ | ಶೀನೂ | 47 |
| ಸಮಾಧಾನ | ಎಚ್. ಡುಂಡಿರಾಜ್ | 61 |
| ಕನ್ನಡ ವ್ಯಾಕ–ರಣ | ಪ್ರಕಾಶ್ | 63 |
| ಒಂದು ದೆವ್ವದ ಕಥೆ | ಶಿವು | 65 |
| ಚತುರ್ವಿಧ ಪರೀಕ್ಷೆಗಳು | ಚಿಂತಾಮಣಿ ಕೊಡ್ಲೆಕೆರೆ | 69 |
| ಹನುಮಣ್ಣನಿಗೆ ಗುರುಕೃಪೆ | ಅ.ರಾ.ಸೇ | 75 |
| ಅಂಡಮಾನೋ ಬಡ್ತಿಯೋ? | ಎಂ.ಪಿ. ಮನೋಹರ ಚಂದ್ರನ್ | 83 |
| ಹೋಯ್! ಮತ್ತೇನು ವಿಶೇಷ? | ಟಿ.ಎಸ್. ಅಂಬುಜ | 89 |
| ವೈದ್ಯೋ ನಾರಾಯಣೋ ..... | ಸೂರಿ ಹಾರ್ದಳ್ಳಿ | 93 |
| ಹಾಸ್ಯ ಎಷ್ಟು ಅವಶ್ಯ? | ಎಚ್. ಡುಂಡಿರಾಜ್ | 97 |
| ಮನೆ ಬದಲಾಯಿಸಿ ನೋಡು | ಕೃಷ್ಣ ಸುಬ್ಬರಾವ್ | 109 |
| ರಕ್ತಪಾತ | ಕಮಲಾ ರಾಮಸ್ವಾಮಿ | 113 |
| ಪ್ರಚಾರ | ಕಂಭಂ ಕೃಷ್ಣಮೂರ್ತಿ | 117 |
| ಒಂದು ಜುಬ್ಬಾ ಕತೆ | ಪ್ರಭಾ | 121 |
| "ಥೂ"ಕಾರ | ಎಂ.ಎನ್.ಕೆ | 129 |
| ರಜಾ ದಿನಗಳು – ಆ ಸುದಿನಗಳು | ಬಾಗೂರು ಚಂದ್ರು | 133 |
| ಉಂಡಮ್ಯಾಲೆ ........ | ಡಾ|| ಬಸವರಾಜ ಸಾದರ | 137 |
| ನಂಬಿ ಕೆಟ್ಟವರಿಲ್ಲ ಗೋವಿಂದ | ವಿಜಯಾ ಸಚ್ಚಿದಾನಂದ್ | 145 |

ಹನಿಗವನಗಳು:– ಶಂಸ, ವೇಣುಗೋಪಾಲ ಸೊರಬ, ಬಸಾ.

ಚಿತ್ರಗಳು:– ಬಾಗೂರು ಮಾರ್ಕಾಂಡೇಯ

# ಅಪರಂಜಿ

(ತಿಳಿ ನಗೆಯ ಕಾರಂಜಿ)

ಸಂಪುಟ ೧೧ ಏಪ್ರಿಲ್ - ೧೯೯೪ ಸಂಚಿಕೆ - ೭

ಪ್ರಾಣಗಳೊಳಗಿರುವ ವಿಜ್ಞಾನಮಯನಿರುವನಲ್ಲ, ಅವನೇ ಆತ್ಮ - ಬೃಹದಾರಣ್ಯಕ

---

ಬೆಲೆಗಳನ್ನು ನೂರು ದಿವಸಗಳಲ್ಲೇ ಇಳಿಸಿಬಿಟ್ಟರು. ಐದೋ ಹನ್ನೆರಡೋ ಸಾವಿರಕೋಟಿ ಹಣ ಎಲ್ಲಿ ಹೋಯಿತು ಎಂದು ಕಂಡುಹಿಡಿದು ಬಿಟ್ಟರು. ಪೆಟ್ರೋಲ್, ಅಕ್ಕಿ, ಸಕ್ಕರೆ ದರಗಳನ್ನು ಏರಿಸಲೇ ಇಲ್ಲ. ದೇಶದಲ್ಲಿ ಪ್ರತ್ಯೇಕತಾ ವಾದ, ಭಯೋತ್ಪಾದನೆಗಳನ್ನು ಒಂದು ಕ್ಷಣವೂ ಸಹಿಸದೆ ಖಂಡಿಸುತ್ತಲೇ ಬಂದಿದ್ದಾರೆ. ಸಮಭಾವ ಸೌಹಾರ್ದ ಉಕ್ಕಿ ಹೊಳೆಯಾಗಿ ಹರಿಯುತ್ತಿವೆ. ಇನ್ನೇನು ಬೇಕು! ಹೊಸ ವರ್ಷದ ಹೊಸ ಹರ್ಷವನ್ನು ಎರಡೂ ಕೈಯಿಂದ ಸುರಿದುಕೊಳ್ಳುವುದೊಂದೇ ಉಳಿದಿದೆ.

ವಾಯು ಜಲ ಆಹಾರಗಳು ಮಾಲಿನ್ಯದಿಂದ ತುಂಬಿದ್ದರೂ, ಅಕ್ಕಿ, ಬಟ್ಟೆ, ಏನೆಂದರೆ ಅದೆಲ್ಲಾ ದುಪ್ಪಟ್ಟು ಮುಪ್ಪಟ್ಟು ಬೆಲೆಯಿದ್ದರೂ, ರಸ್ತೆಗಳು ದುಸ್ವಪ್ನವಾಗಿದ್ದರೂ, ಟಿ.ವಿ. ತಲೆವೊಡಕವಾಗಿದ್ದರೂ, ಜೀವನ ಎಂದಿನಂತೆ ಆಶೆಯ ಬೆನ್ನು ಹತ್ತಿ ಹೊರಟಿದೆ. ಏಕೆಂದರೆ ಪ್ರಾಣದೊಳಗಿರುವವನು ಮುಪ್ಪು, ಸಾವು, ಪಾಪಗಳಿಲ್ಲದ ಆತ್ಮ (ದೇವರು ಅಂತೀವಲ್ಲಾ ಅವನು) ಅದಕ್ಕೇ ಉಪನಿಷತ್ತು ಹೀಗೆ ಹೇಳಿದೆ.



**ಪ್ರಕಾಶ್**

ಬರುವ ವರ್ಷದಲ್ಲಿ ಸಕಲರಿಗೂ
ಸಿಹಿ – ಕಹಿ ಲಭಿಸಲಿ!!

* * *

'ಪತ್ರಿಕಾ ಹೇಳಿಕೆ ಸಮರ' ನಿಲ್ಲಿಸಲು ಶ್ರೀ ದೇವೇ ಗೌಡ ಮನವಿ

**ಸುದ್ದಿ**

ಹಾಗಾದರೆ ಪತ್ರಿಕೆಗಳೆಲ್ಲ ಬಿಕೋ ಅಂತ
ಖಾಲಿಯಾಗಿರುತ್ತವೆ?!

* * *

ರೆವೆನ್ಯೂ ಭೂಮಿ ಅತಿಕ್ರಮ – ಸಕ್ರಮಕ್ಕೆ ನಿಯಮಾವಳಿ

**ಪತ್ರಿಕೆ**

ಇದನ್ನೇ ಇಂಗ್ಲಿಷ್‌ನಲ್ಲಿ 'ರೆಗ್ಯುಲರೈಸ್' ಅನ್ನೋದು!

* * *

ಮೈಸೂರಿನಲ್ಲಿ ಸೌಂದರ್ಯ ಸ್ಪರ್ಧೆಯನ್ನು ಅಬ್‌ಸರ್ವ್ ಮಾಡಲು ಮಹಿಳಾ ವಕೀಲರ ನೇಮಕ

**ಸುದ್ದಿ**

ಅವರು ಮೇಕಪ್ ಹಾಕಿಕೊಳ್ಳಲು ಕೂಡ ಕೋರ್ಟಿನ ಅನುಮತಿ ಕೇಳಬೇಕೇನೋ?

* * *

"ಹಾಲಿನಿಂದ ಆಲ್ಕೋಹಾಲ್"

"ಹಾಲಿನ ಬೆಲೆ ಏರಿಕೆ ಇಲ್ಲ"

**ಸಚಿವ ನಾಗೇಗೌಡರು**

ದಿನಪತ್ರಿಕೆಯಲ್ಲಿ ಅಕ್ಕಪಕ್ಕದ ಸುದ್ದಿಗಳು!!

* * *

ಸಿಂಗರ ಬಜೆಟ್ ಸಾಂಗ್, ಅವರ ಸ್ವಾನ್‌ಸಾಂಗ್ ಆಗದಿರಲಿ ಅಂತ ಹಾರೈಸೋಣ!

* * *

ಸಂಪುಟ ಪುನರ್ರಚನೆ; ಮಾಜೀ ಭಿನ್ನರ ಅಗ್ರಹ

**ಸುದ್ದಿ**

**ಹಾಗಾದರೆ, ಅವರು 'ಮಾಜೀ' ಅಲ್ಲ!!**

* * *

'ಪತ್ರಕರ್ತರಿಗೆ ಅಂತರ್‌ದೃಷ್ಟಿ ಅಗತ್ಯ'

**ಶ್ರೀಲಂಕೇಶ್**

ಹಾಗೇ ಕಾಣುತ್ತೆ!!

* * *

# ಓಡು ನೀ ಬಲುದೂರಕೆ

(ದಿ॥ ವಿ.ಕೃಗೋಕಾಕರ "ಪಾರಿಜಾತದಡಿಯಲ್ಲಿ" ಕವನ ಸಂಗ್ರಹದಲ್ಲಿನ 'ಕಾಶ್ಮೀರ' ಕವನದ ಅಣುಕು ರೂಪ)

**ಅರುಣಾ ಆರ್. ಕಾರಂತ**

ನೆಲವು ಕೆದರಿತು, ಧೂಳು ಎದ್ದಿತು
ಓಡು ನೀ ಬಲು ದೂರಕೆ
ನೊಡು ಕುಕ್ಕುಟರವವೆ ಮೆರೆದಿದೆ
ಇಲ್ಲಿ ಮೊಹಲಿನ ತೀರಕೆ

ನಾಗರಾಯನ ತೆರದಿ ಹರಿದಿದೆ
ಇಲ್ಲಿ ಮೃಣ್ಮಯ ಬೀದಿಯು
ಇಂದ್ರಧನುವನೆ ಹೊದ್ದು ನಿಂತಿದೆ
ಬಣ್ಣಗೊಂಡಿಹ ಗೋಡೆಯು

ಗೊಮ್ಮಟರು ತಪರಲ್ಲಿ ಕುಳಿತೊಲು
ಬೀದಿ ದನಗಳು, ಕರುಗಳು
ಧೂಳೊಳಾಡಿವೆ, ಬರಿದು ಬಾಳಿನ
ಬಟ್ಟೆಗೆಟ್ಟಿಹ ಮಕ್ಕಳು

ಸುತ್ತ ಮಿನಾರುಗಳು ಎದ್ದಿವೆ
ತೋಳ ಚಾಚುತ ಗಗನಕೆ
ಹಸಿರು ಹೂಮರ ಕಾಣೆಯಾಗಿವೆ
ಬಟ್ಟ ಬಯಲದು ಹರಡಿದೆ

ಇಲ್ಲಿ ಕೋಳಿಯು ಕೂಗಿಕರೆದಿದೆ
ಕಾಗೆಗಳು ಕಾಕರಿಸಿವೆ
ಗುಬ್ಬಿಮರಿಗಳು ಚಿಂವ್ರು ಗುಡುತಿವೆ
ಕಪ್ಪೆಗಳು ವಟಗುಟ್ಟಿವೆ

ಹರಿದ ಎಲೆ ಕಾಗದದ ಮಳೆ
ಗಾಳಿಯಾಟಕೆ ಸಿಕ್ಕಿವೆ
ತರಗು ಚಿಂದಿಗಳೆಲ್ಲ ಹಾರಿವೆ
ಬರಡು ಬಯಲನು ತುಂಬಿವೆ

ಇಲ್ಲಿ ನೀರಿಗೆ ಕೆಟ್ಟ ವಾಸನೆ
ಬೇರು ಹರಿದಿದೆ ಬಾರಲಿ
ಇಲ್ಲಿ ಬಾಳಿಗೆ ಹೊಟ್ಟೆಯೇ ಗುರಿ
ಇಲ್ಲಿ ಯೋಗವೆ ಭೋಗವು

ಹಡೆದ ಬಾಯಿಗಳೊಂದಿಗೆದ್ದಿವೆ
ಹಸಿವೆ ಹಿಡಿದಿಹ ಜಠರವು
ಜಗಕೆ ಧಾನ್ಯವ ಕೊಡುವ ರೈತನ
ಪುಣ್ಯಭೂಮಿಯು ನೋಡಿದು

ನೆಲವು ಕೆದರಿತು ಧೂಳು ಎದ್ದಿತು
ಓಡು ನೀ ಬಲು ದೂರಕೆ
ನೋಡು ಕುಕ್ಕುಟರವ ಮೆರೆದಿದೆ
ಇಲ್ಲಿ ಮೊಹಲಿನ ತೀರಕೆ

---

# ವಾರ್ಷಿಕೋತ್ಸವ ಭಾಷಣಗಳು

**ಭುವನೇಶ್ವರಿ ಹೆಗಡೆ**

ಫೆಬ್ರುವರಿ ಮಾರ್ಚ ತಿಂಗಳು ಬಂತೆಂದರೆ ಭಾಷಣ ಕಲೆಯಲ್ಲಿ ಅಷ್ಟಿಷ್ಟು ಪಳಗಿದ ವ್ಯಕ್ತಿಗಳಿಗೆ ಸುಗ್ಗಿ ಕಾಲ. ಎಲ್ಲ ಶಾಲೆ ಕಾಲೇಜುಗಳು ಸಂಘ ಸಂಸ್ಥೆಗಳು ತಂತಮ್ಮ ವಾರ್ಷಿಕೋತ್ಸವ ಇರಲಿ ವೃದ್ಧಾಶ್ರಮವೇ ಇರಲಿ ವಾರ್ಷಿಕೋತ್ಸವ ಆಚರಿಸಲೇ ಬೇಕು. ವರದಿ ವಾಚನ ಬಹುಮಾನ ವಿತರಣೆಗಳಾಗಲೇಬೇಕು. ಎಲ್ಲಿಂದಾದರೂ ಒಂದು ಮುಖ್ಯ ಅತಿಥಿಯನ್ನು ಹಿಡಿದು ತಂದು ಭಾಷಣದ ಶಾಸ್ತ್ರ ಮಾಡಿಸಲೇ ಬೇಕು. ಅಧ್ಯಕ್ಷರನ್ನು ಅಲ್ಲೇ ಯಾರನ್ನಾದರೂ ತಡಕಿದರೂ ಸಾಕು. ಸಭಾ ಕಾರ್ಯಕ್ರಮದ ಶಾಸ್ತ್ರ ಮುಗಿಸಿದ ನಂತರ ಭರ್ಜರಿ ಮನರಂಜನಾ ಕಾರ್ಯಕ್ರಮ ಎಂದು ಪ್ರಕಟಿಸಿದರೆ ಸಾಕು. ಪ್ರೇಕ್ಷಕರಿಗೇನೂ ಕೊರತೆಯಿಲ್ಲ.

ಪ್ರತಿ ವರ್ಷದಂತೆ ಈ ವರ್ಷವೂ ನಾನು ನಾಲ್ಕಾರು ವಾರ್ಷಿಕೋತ್ಸವ ಭಾಷಣ ಮಾಡಿ ಕೃತಾರ್ಥಳಾದೆ. ದೀರ್ಘಕಾಲದ ಬಹುಮಾನ ವಿತರಣೆಯ ಬಳಿಕ 'ವಿದ್ಯಾರ್ಥಿಗಳನ್ನುದ್ದೇಶಿಸಿ ನಾಲ್ಕು ಹಿತವಚನ ಹೇಳುವ' ಮುಖ್ಯ ಅತಿಥಿಯಾಗಿ ನಾನೀಗ ಕೆಲವು ವಾರ್ಷಿಕೋತ್ಸವ ಸತ್ಯಗಳನ್ನು ಕಂಡುಕೊಂಡಿದ್ದೇನೆ. ಇವು ನಿಮ್ಮಲ್ಲಿ ಯಾರೇ ವಾರ್ಷಿಕೋತ್ಸವ ಅತಿಥಿಗಳಾಗುವ ಸಂದರ್ಭದಲ್ಲಿ ನಿಮಗೆ ಮಾರ್ಗದರ್ಶನ ಸೂತ್ರಗಳಾದಾವು ಎಂಬ ಉದ್ದೇಶದಿಂದ ಇಲ್ಲಿ ಸಂಗ್ರಹಿಸಿ ಕೊಡುತ್ತಿದ್ದೇನೆ.

## 1

ಸಂಘಟಕರು ಹೊಂಚು ಹಾಕಿ ನಿಮ್ಮನ್ನು ಹಿಡಿದು ತಮ್ಮ ಶಾಲೆ/ಕಾಲೇಜು/ಸಂಘದ ವಾರ್ಷಿಕೋತ್ಸವ ಐದು ಗಂಟೆಗೇ ಪ್ರಾರಂಭ. ಕಾರ್ಯಕ್ರಮ ಮುಗಿಯುತ್ತಲೇ ನಿಮ್ಮನ್ನು ವಾಹನದಲ್ಲಿ ಮನೆಗೆ ತಲುಪಿಸುವ ಹೊಣೆ ತಮ್ಮದು ಎಂದು ಭರವಸೆ ನೀಡುತ್ತಾರೆ. ಆದರೆ ಯಾವುದೇ ವಾರ್ಷಿಕೋತ್ಸವ 7 ಗಂಟೆಗೆ ಮೊದಲು ಪ್ರಾರಂಭವಾಗಲಾರದು. ವಾರ್ಷಿಕೋತ್ಸವದ ಯಶಸ್ಸು ವಿರಾಮವಾಗಿ ಬಂದು ಕುಳಿತು ಚಪ್ಪಾಳೆಯಿಕ್ಕ ಬೇಕಾದ ಊರ ಪ್ರೇಕ್ಷಕರ ಬಿಡುವಿನ ವೇಳೆಯನ್ನು ಅವಲಂಬಿಸಿರುತ್ತದೆಯೇ ಹೊರತು ಮುಖ್ಯ ಅತಿಥಿಯೆಂಬ ಪ್ರಾಣಿಯ ಸಮಯಾನುಕೂಲವನ್ನಲ್ಲ.

## 2

ಭಾಷಣ ಮುಗಿದ ಬಳಿಕ ಮು.ಅ. ಆದ ನೀವು ನಿಮ್ಮ ಮನೆ ಸೇರಿಕೊಳ್ಳುವ ವಿಧಾನವನ್ನು ಮೊದಲೇ ಕೇಳಿ ನಿರ್ಧರಿಸಿಟ್ಟುಕೊಳ್ಳುವುದು ಒಳ್ಳೆಯದು. ನಿಮ್ಮನ್ನು ವಾಹನದಲ್ಲಿ ಮನೆ ತಲುಪಿಸುವ ಭಾರ ಹೊತ್ತ ನಿಮ್ಮನ್ನು ಕರೆಯಲು ಬಂದ ವ್ಯಕ್ತಿ ಕಾರ್ಯಕ್ರಮ ಮುಗಿಯುತ್ತಲೇ ಅಂತರ್ಧಾನನಾಗಿ ಬಿಡುತ್ತಾನೆ. ನಿಮ್ಮನ್ನು ಗೇಟಿನ ತನಕ ತಲುಪಿಸಲು ಬಂದ ಹೆಡ್‌ಮಾಸ್ತರ್‌ಗಾಗಲೀ ಚಪ್ರಾಸಿಗಾಗಲಿ ಹೆಚ್ಚೇನೂ ವಿಷಯ ತಿಳಿಯದು. ವೃಥಾ ಅವನನ್ನು ಹುಡುಕಿಸುವ ಪ್ರಯತ್ನ ಮಾಡದೇ ನಿಮಗೆ ನೀಡಲಾದ ಹಾರ ತುರಾಯಿ ಹಿಡಿದು ಬಸ್ಸೋ, ರಿಕ್ಷವೋ ಜಟಕಾವೋ ಹಿಡಿದು ಮನೆ ಸೇರಿಕೊಳ್ಳಿ. ಮನೆಯವರ ಬಳಿ ಬೇಕಾದ್ರೆ "ಅವತ್ತಿಲ್ಲಿ ಬಂದ ಜನ ಕಾರಲ್ಲಿ ಬಿಟ್ಟು ಹೋದ್ರು ಕಣೆ" ಎಂದು ಬೇಕಾದರೆ ಹೇಳಿಕೊಳ್ಳಿ.

## 3

ನಿಮ್ಮನ್ನು ಸಮಾರಂಭಕ್ಕೆ ಕರೆಯಲು ಬಂದವರ ಬಳಿ ತೀರಾ ಕ್ಯಾಶುವಲ್ ಧಾಟಿಯಲ್ಲಿ "ಸಭಾಧ್ಯಕ್ಷರು ಯಾರು?" ಎಂದು ಕೇಳಿಕೊಂಡ ಬಳಿಕವೆ ಅತಿಥಿಸ್ಥಾನಕ್ಕೆ ನಿಮ್ಮ ಒಪ್ಪಿಗೆ ನೀಡಿ. ಕೈತುಂಬ ದೇಣಿಗೆ ನೀಡಿದ ಒಂದು ಕಾರಣಕ್ಕಾಗಿ ಅಧ್ಯಕ್ಷ ಸ್ಥಾನ ಗಿಟ್ಟಿಸಿಕೊಂಡ ಕಂಚಪ್ಪನವರೋ  ಹಂಚಪ್ಪನವರೋ ಅಧ್ಯಕ್ಷ ಸ್ಥಾನದಲ್ಲಿ ವಿರಾಜಿಸುವದನ್ನ ಕಂಡು ಮೈ ಬೆವರಿಳಿಯುವ ಸಂದರ್ಭ ತಂದುಕೊಳ್ಳಬೇಡಿ. ಮರುದಿನ ಸ್ನೇಹಿತರು "ಏನ್ರೀ ಅಕಾಳಸಂತೆ ಖದೀಮ ಕಂಚಪ್ಪನವರ ಜತೆ ವೇದಿಕೇಲಿ ಕೂತ ಫೋಟೋ ಬಂದಿದೆ ನೀವೂ ಏನಾದ್ರೂ ......? ಎಂಬ ಪ್ರಶ್ನೆಗೆ ಅವಕಾಶವಾದೀತು ಎಚ್ಚರವಿರಲಿ.

## 4

ಸಂಘಟಕರು ನಿಮಗಿತ್ತ ಸಮಯಕ್ಕಿಂತ ಕನಿಷ್ಟ ಪಕ್ಷ ಒಂದು ತಾಸು ತಡವಾಗಿ ಅಲ್ಲಿಗೆ ಹೋಗಿಳಿದರೆ ಒಳ್ಳೆಯದು. ಭೂಮಂಡಲ ಆಸ್ಫೋಟಿಸುವಂತೆ ಕಿರುಚುವ ಮೈಕುಗಳ ಸಿನಿಮಾ ಸಂಗೀತ ನಿಮ್ಮ ಕರ್ಣಪಟಲಗಳನ್ನು ಹರಿದು ಹಾಕಲು ಅವಕಾಶ ಮಾಡಿಕೊಳ್ಳಬೇಡಿ ಎರಡೂ ಕಿವಿಗಳಲ್ಲಿ ಬೇಕಾದರೆ ಹತ್ತಿಯುಂಡೆ ಇಟ್ಟು ವೇದಿಕೆಯೇರಿದ ಮೇಲೆ ತೆಗೆದರೂ ಆಯ್ತು. ಅಲ್ಲಿಯ ತನಕ ಹೇಗೂ ಯಾರೇನೇ ಪ್ರಶ್ನಿಸಿದರೂ ಉತ್ತರಿಸಿದರೂ ಬಿರಿಯುವ ಮೈಕಾಸುರನ ಭೋರಿಡುವಿಕೆಯಲ್ಲಿ ಯಾರಿಗೂ ಏನೂ ಕೇಳಿಸುವುದಿಲ್ಲ. ಸುಮ್ಮನೆ ನಕ್ಕಂತೆ ಮಾಡುವುದು ಹೂಂಗುಟ್ಟುವದು. ..... ಮಾಡಿದರೆ ಸಾಕಾಗುತ್ತದೆ.

## 5

ಮುಖ್ಯ ಅತಿಥಿ ಸ್ಥಾನದ ನಿಜವಾದ ಹಿರಿಮೆ ಅಡಗಿರುವದು ಬಹುಮಾನ ವಿತರಣೆಯ ಕಾಯಕದಲ್ಲಿ. ಆದೊಂದು ಬಗೆಯ ಶ್ರಮದಾನ ಎಂದರೂ ತಪ್ಪಿಲ್ಲ. ಆಯಾ ಸಂಸ್ಥೆಗಳ ಹಣಕಾಸಿನ ಸ್ಥಿತಿಗನುಗುಣವಾಗಿ ಈ ಬಹುಮಾನ ವಿತರಣಾ ಕಾರ್ಯ ಕನಿಷ್ಠ ತಾಸೆರಡು ತಾಸು ನಡೆಯುತ್ತದೆ. ಅದು ಮುಗಿಯವ ತನಕವೂ ಮು.ಅ.ಆದ ನೀವು ಮುಗುಳ್ನಗುತ್ತಲೇ ಇರಬೇಕಾಗುತ್ತದೆ ಎಂಬ ಶೋಚನೀಯ ಸತ್ಯವನ್ನು ಮರೆಯಬೇಡಿ. ಮಡಕೆ ಒಡೆಯುವ ಸ್ಪರ್ಧೆ, ಇಡ್ಲಿ ತಿನ್ನುವ ಸ್ಪರ್ಧೆ ...... ಮೊದಲಾದ ಸ್ಪರ್ಧಾ ವೈಖರಿಗಳಿಗೆ ಬೆರಗಾಗಿ ಬಾಯ್ಬಿಡುವ ಬೆಪ್ಪನಂತೆ ನೀವು ಕಾಣಿಸಿಕೊಳ್ಳಬಾರದು. ನಿಮ್ಮ ಮುಖದಲ್ಲಿರಬೇಕಾದುದು ಏನೇ ಇದ್ದರೂ ಆ ಕ್ಷಣಕ್ಕೆ ಉತ್ತೇಜನ ನೀಡುವ ಕ್ರೀಡಾಳುಗಳಿಗೆ ಪ್ರೋತ್ಸಾಹ ನೀಡುವ ಒಂದು ಮುಗುಳ್ನಗೆ ಮಾತ್ರ. ಅದೇ ಜಲಜ ಅದೇ ವನಜ ಇಪ್ಪತ್ತು ಬಾರಿ ವೇದಿಕೆಯೇರಿ ನಿಮ್ಮಿಂದ ಬಹುಮಾನ ಪಡೆದರೂ ನೀವು ಹೇಗೂ ನಕ್ಕಾಗಿದೆ ಎಂದು ಸಮ್ಮನೆ ಕೈ ಮೇಲೆ ಬಹುಮಾನ ಇಕ್ಕುವಂತಿಲ್ಲ. ಯಾಕೆಂದರೆ ಫೋಟೋಗ್ರಾಫರ್ ಯಾವ ಬಹುಮಾನ ನೀಡುವಾಗ ಫೋಟೋ ತೆಗೆಯುತ್ತಾನೆಂದು ಹೇಳುವಂತಿಲ್ಲ.

ಬೇಸರ ತರುವ ಶ್ರಮದ ಕೆಲಸಗಳನ್ನೇನಿದ್ರೂ ಈ ಗಂಡು ಕುಲ ಜಾಣ್ಮೆಯಿಂದ ಸ್ತ್ರೀ ಕುಲಕ್ಕೆ ಅಂಟಿಸುತ್ತ ಅನಾದಿಯಿಂದ ಹಾಯಾಗಿರುವ ವಿಷಯ ನಮಗೆಲ್ಲ ತಿಳಿದಿದೆಯಷ್ಟೇ? ವೇದಿಕೆಯ ಮೇಲಿನ ಮುಖ್ಯ ಅತಿಥಿಯ ಈ ದೀರ್ಘ ಶ್ರಮದ ಕೆಲಸವನ್ನು ಮಾಡಿಸಲೆಂದೇ ಕೆಲವು ಗಂಡು ಮುಖ್ಯ ಅತಿಥಿಗಳು ತಂತಮ್ಮ ಹೆಂಡಂದಿರನ್ನು ಕರೆದೊಯ್ಯುತ್ತಾರೆ. ಹೆಂಡತಿ ಬಹುಮಾನ ವಿತರಿಸಲು ಗಂಡ ಭಾಷಣ ಮಾಡಲು. ಸರಿಯೇ ಸರಿ. ಶ್ರಮ ವಿಭಜನೆಯ ಈ ಸೂತ್ರದ ಕುರಿತು ನನ್ನದಂತೂ ಆಕ್ಷೇಪವಿಲ್ಲ.

ಆದರೆ ನೀವು ಹೆಣ್ಣು ಮುಖ್ಯ ಅತಿಥಿಯಾಗಿ ಭಾಷಣ ಮಾಡಲು ನಿಮ್ಮ ಜತೆ ನಿಮ್ಮ ಪತಿರಾಯರು ಬಂದು ಬಹುಮಾನ ವಿತರಣೆ ಮಾಡುವ ಒಂದು ದೃಶ್ಯವನ್ನು ಕಲ್ಪಿಸಿಕೊಳ್ಳಲಾಗುತ್ತಿದೆಯೆ? ಊಹುಂ ನಾನಿದುವರೆಗೂ ಇಂಥದೊಂದು ಚಾರಿತ್ರಿಕ ದೃಶ್ಯದ ವರದಿಯನ್ನು ಎಲ್ಲೂ ಓದಿಲ್ಲ ಕೇಳಿಲ್ಲ.

ಹೋಗಲಿ ಬಿಡಿ ವಿಷಯಾಂತರ ಮಾಡಲಿ ಯಾಕೆ? ನೀವು ಹೆಣ್ಣೋ ಗಂಡೋ ಸಧ್ಯಕ್ಕೆ ಮುಖ್ಯ ಅತಿಥಿ ಅಷ್ಟೆ. ಬಹುಮಾನ ವಿತರಣೆಯಿಂದ ಬಳಲಿದ ನೀವು ತೀರಾ ಮಂದಧಾಟಿಯಲ್ಲಿ 'ನಾಲ್ಕು ಹಿತವಚನ ಹೇಳಿ' ಕುಳಿತುಕೊಳ್ಳುವದೊಳ್ಳೆಯದು. ಏಕೆಂದರೆ ನೀವು ಏನೇ ಮಾತಾಡಿದರೂ ಮನರಂಜನಾಸಕ್ತರಾದ ಸಭಿಕರು ಏನೇನೂ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿರುವದಿಲ್ಲ. ಅಧ್ಯಕ್ಷರಿಗೂ ತಮ್ಮ ಮನೆ ಸೇರಿಕೊಳ್ಳುವ

ಚಿಂತೆ ಸಾಕಷ್ಟಿರುವುದರಿಂದ, ತಮ್ಮ ಸರದಿ ಬಂದು ಅಧ್ಯಕ್ಷ ಸ್ಥಾನದ ನಾಲ್ಕು ಮಾತಾಡಲು ಕಾತರರಾಗಿರುತ್ತಾರೆಯೇ ಹೊರತು ನಿಮ್ಮ ಮಾತನ್ನು ಆಲಿಸುವ ಸ್ಥಿತಿಯಲ್ಲಿರುವದಿಲ್ಲ.

ಆದ್ದರಿಂದ ತೀವ್ರ ಸ್ಥಾಯಿಯಲ್ಲಿ ಭಾಷಣ ಮಾಡಲು ಹೋಗಿ ಅರ್ಧ ಭಾಷಣಕ್ಕೇ ಸ್ವರ ಕುಂಯ್ ಆಗಿ 'ಹತಸ್ವರ'ರಾಗುವ ಸ್ಥಿತಿ ತಂದುಕೊಳ್ಳಬೇಡಿ. ಏಕೆಂದರೆ ಹಾಗೆ ಭಾಷಣದ ನಡುವೆ ಸ್ವರ ಪಢ್ಚ ಆಗಿ ನೀರು ಕುಡಿದು ಕೆಮ್ಮಿ ಕ್ಯಾಕರಿಸಿ ಏನು ಮಾಡಿದರೂ ಸ್ವರ ಮತ್ತೆ ಏಳದೇ ಅಸಹಾಯಕರಾಗಿ ಕೈ ಮುಗಿದು ಕುಳಿತ ಅತಿಥಿಗಳನ್ನು ನಾನು ನೋಡಿದ್ದೇನೆ. ಅದಕ್ಕಿಂತ ಸಂದರ್ಭೋಚಿತವಾಗಿ ನಾಲ್ಕು ಹಿತವಚನ ಹೇಳಿ ಕುಳಿತುಕೊಳ್ಳುವುದೇ ಕ್ಷೇಮವಲ್ಲವೆ?

---



"ಹೌದು ಪ್ರಿಯ! ಹುಶ್ಯಂತ ಬಂದಿರೋ ನಾನೇ ದುಶ್ಯಂತ!"

# SHAಡೋ CAಬಿನೆಟ್

ಕೇಫ

ಈ ತರಲೆ ಶುರುವಾದದ್ದು ನಮ್ಮ ರಿಪಬ್ಲಿಕ್ ಡೇ ದಿನ - ಅಂದ್ರೆ ಮಳೆಗಾಲದಲ್ಲಿ ಬರೋ ವದ್ದೆ ಸಮಾರಂಭ ಅಲ್ಲ - ಛಳಿಗಾಲದಲ್ಲಿ ನಡಗ್ತಾ ಮಾಡೋ ಸಮಾರಂಭದಲ್ಲಿ. ಆ ದಿನ ನಮ್ಮ ಮೈಗಳ್ಳರ ಸಂಘದಲ್ಲಿ ಭಾರೀ ಸಂಭ್ರಮ. ಆ ದಿನ ಬೆಳಿಗ್ಯೆ ನಮ್ಮ ಸಂಘದ ಅಧ್ಯಕ್ಷ ಟಿಪ್ಸಿ ಬಂದ ತಕ್ಷಣ - ಧ್ವಜಾರೋಹಣ. ಆಮೇಲೆ ನಮ್ಮ ಸಂಘದ ವಿವಿಧ ಕಾಲಾ-ಕ್ಷಮ್ಸಿ-ಕಾರ್ಯಕಲಾಪಗಳು-ಸುಮಾರು ಮೊದಲ್ನೇ ಷೋ ಮುಗಿಯೋ ಸಮಯದವರ್ಗ್ಗೂ. ಆಮೇಲೆ - ಸೆಕೆಂಡ್ ಷೋ ಟೈಂವರ್ಗ್ಗೂ ಕಾಕ್‌ಟೆಯಿಲ್ ಡಿನ್ನರು ನ್ಯಾಷನಲ್ ಆಂಥೆಮ್ಮು. ಮೂರನೇ ದಿನ ವೈಕುಂಠದ ಥರಾ ದೆಹಲೀಲಿ ನಡೆಯೋ ರೀತಿಲಿ ಬೀಟಿಂಗ್-ದಿ-ರಿಟ್ರೀಟ್ ಸಮಯದಲ್ಲಿ ಬಾಬು ಕೈಯಿಂದ ಧ್ವಜ ಅನಾವರಣ ಮತ್ತು ಲಾಂಗ್ ಲಿವ್ ರಿಪಬ್ಲಿಕ್. ಡಿನ್ನರ್ ಮುಗಿದ ಮೇಲೆ ಎಂಟರ್‌ಟೈನ್‌ಮೆಂಟು - ಈ ಬಾರಿ ಡೋಂಟ್ ಫಿಕರ್ ಬಸ್ ಕಂಡಕ್ಟರ್ ಖಾದರ್‌ದು ಮಿಮಿಕ್ರಿ ಇತ್ತು. ಖಾದರ್ ತನ್ನ ಮಿಮಿಕ್ರಿ ಕೊನೇ ಐಟಮ್ - ಅವನ ಮಾಸ್ಟರ್ ಪೀಸ್ - ಬುಡನ್ ಸಾಹೇಬ್ರು ಬಸ್ ರಿವರ್ಸ್ ಮಾಡೋದು ಪ್ರದರ್ಶನ ಮಾಡಿದ್ದಾಗ, ಭಾನ್‌ಸಿಂಗ್ ಇದ್ದಕ್ಕಿದ್ದ ಹಾಗೇ ಟೇಬಲ್ ಕುಟ್ಟಿ "ಷ್ಯಾಡೋ ಕ್ಯಾಬಿನೆಟ್!" ಅಂತ ಕಿರುಚಿಕೊಂಡ.

ಟೇಬಲ್ ಮೇಲಿದ್ದ ಗ್ಲಾಸುಗಳಲ್ಲಿ ಮೂರು ಕೆಳಕ್ಕೆ ಬಿದ್ವು. ಬೇರರ್ ಮುತ್ತಣ್ಣ ಕೂಡ್ಲೆ ಚೂರುಗಳನ್ನ ಗುಡಿಸಿಕೊಂಡು ಹೊರಕ್ಕೆ ತಕೊಂಡು ಹೋದ.

'ಏನಯ್ಯ ಅದು ನನ್ನ ಷ್ಯಾಡೋ ಬೀರು?" ಅಧ್ಯಕ್ಷ ಟಿಪ್ಸಿ ಕೇಳಿದ.

"ಕ್ಯಾಬಿನೆಟ್ ಅಂದ್ರೆ ಆ ಬೀರು, ಅಲ್ಲಯ್ಯ - ಮಂತ್ರಿ ಮಂಡ್ಲ! ನಮ್ಮ ಸಂಘದಲ್ಲಿ ಒಂದು ಮಂತ್ರಿ ಮಂಡ್ಲ ಕೂಡಿಕೊಂಡು ನಾವು ದೆಹಲೀನ ವಾಚ್‌ಮಾಡ್ಬೇಕಯ್ಯಾ" ಅಂದ ಭಾನ್‌ಸಿಂಗ್.

ಭಾನ್‌ಸಿಂಗ್ ತೊದಲಿದ್ದು ಟಿಪ್ಸೀಗೆ ಸುತಾರಾಂ ಅರ್ಥವಾದ ಹಾಗಿರಲಿಲ್ಲ.

"ಷ್ಯಾಡೋ" ಅಂತ ಕೂಗಿದ.

ಬೇ.ಮು. ಬಂದ.

"ಇವತ್ತು ಸಾಹೇಬ್ರು ಎಷ್ಟು ಬಸ್ಕೊಂಡ್ರು?"

"ಕಣಕು ನೋಡಿ ಯೇಳ್ಬೇಕು ಸಾರ್"

"ಲೋ ಟಿಪ್ಸಿ – ನಾನೇನು ಜಾಸ್ತಿ ಡ್ರಿಂಕಿಲ್ಲ ಕಣಯ್ಯ. ನಾವೆಲ್ಲಾ ಸುಮ್ನೆ ಈ ದಿನಗಳ್ನೆಲ್ಲಾ ಸೆಲಿಬ್ರೇಟ್ ಮಾಡೋದಲ್ದೆ ಪಾಲಿಟಿಕ್ಸ್‌ನಲ್ಲೂ ಇಂಟ್ರೆಸ್ಟ್ ತಕೋಬೇಕಯ್ಯ. ಅಮೆರಿಕಾ ರಷ್ಯಾಗಳಲಿದ್ದ ಹಾಗೆ ನಾವೂ ಒಂದು ಷ್ಯಾಡೋ ಕ್ಯಾಬಿನೆಟ್ ರಚಿಸಿ ಒಬ್ಬೊಬ್ಬ ಮಿನಿಸ್ಟ್ರಿಗೂ ಅಂದ್ರೆ ಒಬ್ಬೊಬ್ಬ ಮೆಂಬರಿಗೂ ಒಂದೊಂದು ಪೋರ್ಟ್‌ಫೋಲಿಯೋ ಕೊಟ್ಟು ದೆಹಲೀ ಮಂತ್ರಿ ಮಂಡಲಾನ ಚೆಕಿಂಗ್ ಮಾಡ್ತಾ ಇರ್ಬೇಕು."

ಭಾನ್‌ಸಿಂಗ್ ಹೇಳಿದ್ದನ್ನ ಅರ್ಥಮಾಡಿಕೊಂಡು ಅರಗಿಸಿಕೊಳ್ಳೋಕೆ ನಮಗೆಲ್ಲಾ ಸ್ವಲ್ಪ ಸಮಯವಾಯ್ತು. ಅಂದರೆ ಆರೇಳು ಗುಟುಕು ಸಮಯ. ಕಾರಣ – ಭಾನ್‌ಸಿಂಗ್‌ಗೆ ಮ್ಯಾಪ್‌ನಲ್ಲೂ ಅಮೆರಿಕಾ ರಷ್ಯಾಗಳನ್ನ ಗುರುತಿಸೋಕೆ ಬರೊಲ್ಲ. ಹಾಗೂ ಆ ದೇಶಗಳಲ್ಲಿ ಷ್ಯಾಡೋ ಕ್ಯಾಬಿನೆಟ್ ಅಂತಾ ಒಂದು ಐಟಮ್ ಇದೆ ಅಂತ ಯಾರಿಗೆ ಗೊತ್ತು? ಆದರೂ ಯಾವ ಹಾವಿನಲ್ಲಿ – ಐ ಮೀನ್ – ಯಾವ ಹುತ್ತದಲ್ಲಿ ಯಾವ ಹಾವಿದೆ ಅಂತ ಯಾರಿಗೆ ಗೊತ್ತು?

"ಟಿಪ್ಸಿ, ಭಾನ್‌ಸಿಂಗ್ ಹೇಳಿದ ಪ್ಲಾನನ್ನ ಟ್ರೈ ಮಾಡೇಬಿಡೋಣ" ಅಂದ ನಮ್ಮ ಸಂಘದ ಫಾಸ್ಟ್ ಬೌಲರ್ ಸಿಂಗ್ರೈಯಂಗಾರಿ.

"ಆಕ್ಷನ್!" ಅಂತ ಕಿರುಚಿದ ಬಗ್ಗೆ.

"ಆಲ್ ರೈಟ್ – ಯಾವತ್ತಿಟ್ಕೊಳೋಣ ನಿನ್ನ ಆ...."

"ಷ್ಯಾಡೋ ಕ್ಯಾಬಿನೆಟ್.."

"ಯಸ್ – ಅದನ್ನ?"

"ಇವತ್ತೇ – ಈಗ್ಲೇ – ಇಲ್ಲೇ" ಭಾನ್‌ಸಿಂಗ್ ಟೇಬಲ್ ಕುಟ್ಟಿದ. ಉಳಿದಿದ್ದ ಒಂದು ಗ್ಲಾಸ್ ಕೆಳಕ್ಕೆ ಬಿತ್ತು.

"ಆಗೊಲ್ಲ! ಇವತ್ತು ಇಂಪಾಸಿಬಲ್ – ನೋನೋ!" – ಅಂತ ಎಲ್ಲಾ ಕೊರಳುಗಳೂ ಕಿರ್ಲಿದೆವು.

"ಯಾಕೆ!?" – ಸದ್ಯ ಭಾ.ಸಿಂ. ಟೇಬಲ್ ಕುಟ್ಟಲಿಲ್ಲ. ಕುಟ್ಟಿದ್ದರೆ ಐಸ್ ಬಕೆಟ್ ಕೆಳಕ್ಕೆ ಬಿದ್ದಿರೋದು.

"ಮೊದಲು ಚುನಾವಣೆ ಆಗ್ಬೇಕು. ನಮ್ಮ ಸಂಘದ ಗ್ರೂಪುಗಳು ತಮ್ಮ ಸಭೆಗಳನ್ನ ಸೇರಿಸಬೇಕು – "ಅಂತ ಸ್ವಲ್ಪ ಸೋಬರ್ರಾಗದ್ದ ಫಾಸ್ಟ್ ಬೌಲರ್ ಸಿಂಗ್ರೈಯಂಗಾರಿ ಪಾಯಿಂಟಾಫ್ ಆರ್ಡರ್ ತಂದ.

“ಅದೇ ಸರಿ – ಇಂಜಿನ್ ಕೆಲ್ಸದ ಥರಾ ಮೆಯಿನ್ ಜಾಬು” ಪೀಟರ್ ಸೇರಿಸಿದ.

ನಮ್ಮ ಮೈಗಳ್ಳರ ಸಂಘದಲ್ಲಿರೋ ನಾಲ್ಕು ಗ್ರೂಪುಗಳು ನಿಮಗೆ ಗೊತ್ತಿರಬಹುದು. ಲೇಟೆಸ್ಟ್ ಮೆಯಿನ್ ಗ್ರೂಪುಗಳು ಈ ರೀತಿ ಇವೆ –

1. ಅಮೃತಾ ಸಿಂಗ್ ಅಭಿಮಾನಿ ಗ್ರೂಪ್ (ಎ.ಎ.ಜಿ.)

2. ಇಟ್ಟಿಗೇ ಗೂಡ ಡೂನ್ಸ್ ಗ್ರೂಪ್ (ಐ.ಡಿ.ಜಿ.)

3. ಮೆಟ್ರಿಕ್ ರಿಪೀಟರ್ಸ್ ಗ್ರೂಪ್ (ಎಂ.ಆರ್.ಜಿ.)

4. ರೇಖಾ ಪೈತ್ಯಂ ಗ್ರೂಪ್ (ಆರ್.ಪಿ.ಜಿ.)

ಕೊನೇ ಆರ್.ಪಿ.ಜಿ. ನಮ್ಮ ಮೈಗಳ್ಳರ ಸಂಘದಲ್ಲಿ ತಮಿಳು ಟಚ್ ಇರ್ಲಿ ಅಂತ ಫಾಸ್ಟ್ ಬೌಲರ್ ಸಿಂಗ್ಯೆಯಂಗಾರಿ ಸ್ಥಾಪಿಸಿರೋ ಗ್ರೂಪು. ಈ ಗ್ರೂಪುಗಳಿಗೆ ಕ್ರಮವಾಗಿ 'ಲೀಡರ್ಸ್ – 1. ಭಾನ್‌ಸಿಂಗ್ (ಎ.ಎ.ಜಿ.) 2. ಬಾಬು ಅಲಿಯಾಸ್ ಸೈಯದ್ ಖಲಂದರ್ (ಐ.ಡಿ.ಜಿ.) 3 ಪೀಟರ್ (ಎಮ್.ಆರ್.ಜಿ.) ಮತ್ತು 4. ಫಾ.ಬೌ. ಸಿಂಗ್ಯೆಯಂಗಾರಿ (ಆರ್.ಪಿ.ಜಿ.) ಇವುಗಳಲ್ಲದೆ ಅನಫಿಷಿಯಲ್ಲಾಗಿ ಲಾಬಿಗಳಿವೆ – ಕಬಡ್ಡಿ ಲಾಬಿ, ಹುಕುಮ್–ಕ–ಎಕ್ಕಾ ಲಾಬಿ ಇತ್ಯಾದಿ.

ಮೊದಲು ನಮ್ಮ ಐಡಿಜಿ ಸಭೆ ಸೇರಿದೆವು. ನಮ್ಮ ಗ್ರೂಪ್ ಲೀಡರ್ ಬಾಬು ಹೇಳ್ಬಿಟ್ಟ – “ಪಾಂಡು, ನಾನು ಮೀಟಿಂಗ್‌ನಾಗಿರಾಕಿಲ್ಲಾ. ನಾನು ಮದ್ರಾಸ್ ಟ್ರಿಪ್ ಹಾಕಿದ್ದೇನೆ. ನಮ್ಮ ಗ್ರೂಪ್ ಯಾವ್ದೇ ಛಾವ್‌ಕಾ – ಅಂದ್ರೆ ಪ್ಯಾಡೋ ಬೀರೋ ಫಾರಮ್ ಆಗ್ಲಿ – ಕನ್‌ಟ್ರಾಕ್ಟ್ ಆಪೋಸಿಟ್‌ನಾಗಿರ್ಬೇಕು – ನೀನೇ ನಮ್ಮ ಇಟಗೇಗೂಡ್ ಡೂನ್ಸ್ ಲೀಡರು – ತಿಳೀತಾ?–

“ಕನ್‌ಟ್ರಾಕ್ಟ್ ಆಪೋಸಿಟ್ ಲೀಡರು – ಅದ್ವಾನೀ ತರಾ” ಅಂತ ಅನ್ನೋದರೊಳಗಾಗಿ ನಮ್ಮ ಡೂನ್ಸೆಲ್ಲಾ – “ಪಾಂಡೂ ನೀನು ಹೇಗೂ ಇನ್ನು ಮುಂದೆ ಪ್ಯಾಡೋಗೆ ಷ್ಯಾಡೋ ಕಣೋ! ಕಂಗ್ರಾಟ್ಸ್!”– ಅಂತ ನನ್ನ ಬೆನ್ನು ತಟ್ಟಿ ನನ್ನ ಲೆಕ್ಕದಲ್ಲಿ ಮುತ್ತಣ್ಣನ ಕೈಲಿ ಹಾಫು ಕ್ವಾರ್ಟರು ಫುಲ್ಲು ತರ್ಸಿ ಜೊತೆಗೆ ಚಿಪ್ಸು, ಕ್ಯಾಷ್ಯೂ, ಡಾಲ್‌ಮೋಟ್ ಸಮಾರಾಧನೆ ನಡೆಸಿಬಿಟ್ರು.

ಮಾರನೇ ದಿನ ನನ್ನ ಬೆಳಗ್ಗಿನ ಮಾಮೂಲುಗಳನ್ನೆಲ್ಲಾ ಮುಗಿಸಿಕೊಂಡು ನಮ್ಮ ಮೈ.ಸಂ. ಅಧ್ಯಕ್ಷ ಟಿಪ್ಸೀ ಮನೆಗೆ ಹೋದೆ. ನಾನಿನ್ನೂ ಅವನ ಮನೆ ಮೆಟ್ಲು ಹತ್ತೋದ್ರೊಳಗಾಗಿ ಒಂದು ಕಿಟಕಿ ಮೂಲ್ಕ– “ಫುಯ್! ಫುಯ್”– ಅಂತ ವ್ಹಿಸಲ್ ಶಬ್ದ ಕೇಳಿಬಂತು. ಕಿಟಕಿ ಕಡೆ ಸೂಕ್ಷ್ಮವಾಗಿ ನೋಡಿದೆ – ಟಿಪ್ಸಿ!

"ಪಾಂಡು – ಮನೆ ಒಳಕ್ಕೆ ಬರ್ಬೇಡ – ಹೋಗಿ ಕುಂಞಕುಟ್ಟಿ ಅಂಗಡೀ ಪತ್ರ ಇರು – ನಾನೇ ಬರ್ತೇನೆ" – ಅಂತ ಹೇಳಿ ಮಾಯವಾದ. ನಮ್ಮ ಕನ್ನಡ ಚಿತ್ರಗಳಲ್ಲಿ ವಿಲನ್ಸ್ ಹಲ್ಲುಗಳ ಮಧ್ಯದಿಂದ – ತಮ್ಮ ಹಲ್ಲುಗಳ ಮಧ್ಯದಿಂದ ಮಾತಾಡೋ ರೀತೀಲಿ ಪಿಸುಗುಟ್ಟಿದ.

ಕುಂಞಕುಟ್ಟಿ – ಕುಯ್ಯಿಕುಟ್ಟಿ – ಅಂತ ಓದಿಕೊಂಡರೆ ಸಾಕು – ಅಂಗಡಿ ಅಂದರೆ ಶಿವರಾಂಪೇಟೆ ಫೇಮಸ್ ಲಾಟರೀ ಕಮ್ ಬಕೆಟ್ ಪಾಪು. ಕುಯ್ಯಿಕುಟ್ಟೀ ಅಂಗಡೀನೇ ನಮ್ಮ ವಾರ್ಷಿಕೋತ್ಸವದ ಮ್ಯಾರತಾನ್ ರೇಸಿನ ಫಿನಿಷಿಂಗ್ ಪೋಸ್ಟ್. ಕುಯ್ಯಿಕುಟ್ಟೀನೇ ನಮ್ಮ ಮ್ಯಾರತಾನ್‌ಗೂ ಅಫಿಷಿಯಲ್ ಬುಕೀ.

ಟಿಪ್ಸಿ ಬಂದ.

"ರಾತ್ರಿ ಎಲ್ಲಿದ್ದೆ?" ಕೇಳಿದೆ.

"ಸಂಘದ ಬ್ಲೂ ರೂಮಿನಲ್ಲಿ ಎಲೆಕ್ಷನ್ ಮೀಟಿಂಗ್ ಇತ್ತಲ್ಲಾ – ಭಾನ್‌ಸಿಂಗ್ ಪೀಡೆ – ಫ್ಯಾಡೋ ಬಿಸಿನೆಸ್"

"ನೀನು ತಾನೇ ಪಿ.ಎಂ?"

"ನೋ. ನಾನು ಅಧ್ಯಕ್ಷನಾಗಿರೋದ್ರಿಂದ ನಾನು ಯಾವ ಗ್ರೂಪಿಗೂ ಸೇರ್ದೋನಲ್ಲವಂತೆ – ಬಗ್ಗನ ಪ್ರಕಾರ. ಆ ಮುಟ್ಠಾಳನಿಗೆ ನಾನ್ ಪಾರ್ಟಿಮ್ಯಾನ್ ಅನ್ನೋದಕ್ಕೆ ಸರಿಯಾದ ವರ್ಡ್ ಸಿಕ್ದೆ ನನ್ನನ್ನ – ನಪುಂಸಕ – ಅಂದುಬಿಟ್ಟ. ಅದರರ್ಥ – ನಾನು ಯಾವ ಗ್ರೂಪಿಗೂ ಸೇರ್ದೋನಲ್ಲ – ಆದ್ದರಿಂದ ಯಾವ ಪಟ್ಟಕ್ಕೂ ಒಪ್ಪೋಬಾರ್ದು ಅಂದ. ಆಗ ಭಾನ್‌ಸಿಂಗ್, ಪೀಟರ್ರು ಫಾಸ್ಟ್ ಬೌಲರ್ ಸಿಂಗ್ಯೆಯಂಗಾರಿ, ಗೊರಿಲ್ಲಾ ಪ್ರಭು, ಸೂರಿ, ಷಬ್ಬೀರು, ವೆಂಕು – ಎಲ್ರೂ ಸೇರಿ ಬಗ್ಗನ್ನ ಹಿಗ್ಗಾ ಮುಗ್ಗ ತದಕಿದ್ರು. ನಾನೇ ಪಾಪ ಅಂತ ಬಿಡಿಸ್ದೆ. ಆಮೇಲೆ ಬಗ್ಗನೇ ಎಕ್ಸ್‌ಪ್ಲೈನ್ ಮಾಡ್ದ. ಅವನು ನಪುಂಸಕ ಅಂದಿದ್ದು ನ್ಯೂಟ್ರಲ್ ಅನ್ನೋ ಅರ್ಥದಲ್ಲಿ – ಅಂತ!"

"ಪಿ.ಎಂ. – ಯಾರು?"

"ಯಾರೂ ಮುಂದಕ್ಬರಲಿಲ್ಲ. ವೆಂಕು ಕಿಟ್ಟಿ – ನಿನ್ನ ಹೆಸರನ್ನ ಸೂಚಿಸಿದರು"

"ವೆಂಕು ಕಿಟ್ಟಿ? ಅವರು ಐ.ಡಿ.ಜಿ. ಅಲ್ವೆ?"

"ಹೌದು. ಐ.ಡಿ.ಜಿ. ಮೀಟಿಂಗಾದ ಮೇಲೆ ಅವರಿಬ್ರೂ ಮನೆಗೆ ಹೋಗ್ಲೇ ಇಲ್ಲ. ರಾತ್ರಿ ಹಾಲಿನಲ್ಲಿ ಕೂತಿದ್ದೋರು ಗ್ಲಾಸುಗಳ ಸಮೇತ ಬ್ಲೂ ರೂಮಿಗೆ ನುಗ್ಗಿದರು.

ಅಲ್ಲಿ ಅಸೆಂಬ್ಲೀಲೂ ಸೇರ್ಕ್ಕೊಂಡ್ರು. ಇಬ್ರೂ ಮಾತಾಡ್ಕೊಂಡು ನಮ್ಮ ಪಾಂಡೂನೇ ಪಿ.ಎಂ. ಆಗ್ಲಿ – ಷ್ಯಾಡೋ ಮೇಲೆ ಷ್ಯಾಡೋ ಆಗುತ್ತೆ ಅಂದ್ರು. ಇಡಿಯಟ್ಸು. ಬಗ್ಗ ಎದ್ದು ಅವರಿಬ್ರನ್ನೂ ನಾಕೌಟ್ ಮಾಡ್ದ."

ಮೈ.ಸಂ. ಅಸೆಂಬ್ಲೀ ಸೀನ್ ಷೋಲೇ ಸೀನ್ ಥರಾ ಇತ್ತೂಂತ ತೋರಿತು – ನಂಗೆ.

"ಪಿ.ಎಂ. ಆಗೋದಕ್ಕೆ ಯಾಕೆ ಯಾರೂ ಒಪ್ಲಿಲ್ಲ?"

"ಅದು ತುಂಬಾ ಡೆಸ್ಪಾಟಿಬಲ್ – ಅಂದ ಬಗ್ಗ. ರೆಸ್ಪಾನ್ಸಿಬಲ್ ಅನ್ನೋದಕ್ಕೆ ಅವನ ನಾಲಿಗೆಗೆ ಬರ್ಲಿಲ್ಲ. ಆದರೆ ಡೆಪ್ಯೂಟಿ ಪಿ.ಎಂ. ಆಗೋಕೆ ನಾನು ತಾನೂಂತ ಪೀಟರ್ರು ಬಾನ್‌ಸಿಂಗ್ ಫಾಸ್ಟ್‌ಬೌಲರ್ ಸಿಂಗ್ರೈಯಂಗಾರಿ ಪ್ರಭು ಸೂರಿ – ಒಟ್ಟಿಗೆ ಎದ್ದು ನಿಂತ್ರು. ಆ ಪೋಸ್ಟಿಗೆ ಅಥಾರಿಟಿ ಇದೆ ಜವಾಬ್ದಾರಿ ಇಲ್ವಂತೆ. ಅದಕ್ಕೇ ಆ ಪೋಸ್ಟಿಗೆ ನೂಕುನುಗ್ಲು. ಈ ಮಧ್ಯೆ ಭಾನ್‌ಸಿಂಗ್‌ಗೂ ಪೀಟರ್‌ಗೂ ಕೈಕೈ..."

'ಸ್ಟಾಪ್ ಟಿಪ್ಸಿ!" ಅಂದೆ.

"ಯಸ್ – ಏನು?"

"ಎಲೆಕ್ಷನ್ ಏನಾಯ್ತು ಹೇಳಿ ಮುಗಿಸು" ಅಂದೆ.

"ಕಡೆಗೆ ಬಗ್ಗನ ಮೇಲೆ ಪಿ.ಎಂ. ಪದವಿ ಹೇರಿಸಿದೆವು. ಬಾಬೂ ಫ್ಯಾನ್ಸೀ ಸ್ಟೋರಿಂದ ಅವನಿಗೆ ಫರ್‌ಕ್ಯಾಪು ಜೊತೆಗೆ ಒಂದು ಬ್ಯಾಟನ್ ಸ್ಟಿಕ್ಕು ಪ್ರೆಸೆಂಟ್ ಮಾಡೋಕೆ ಷಬ್ಬೀರ್ ಒಪ್ಪಿಕೊಂಡ."

"ಬಗ್ಗ – ಪಿ.ಎಂ. ಅಂದ್ರೆ ಎಂ.ಆರ್.ಜಿ. – ಕಬಡ್ಡಿ ಲಾಬೀಗೆ ಅಧಿಕಾರ!"

"ಬಗ್ಗ ಎಂ.ಆರ್.ಜಿ.ಯಿಂದ ಎ.ಎ.ಜಿ.ಗೆ ಕ್ರಾಸ್ ಮಾಡಿದ್ದನಂತೆ ಆ ಕಾರಣ ಭಾನ್‌ಸಿಂಗ್‌ಗೆ ಡೆಪ್ಯುಟಿ ಪಿ.ಎಂ. ಪದವಿ ಸಿಗಲಿಲ್ಲ. ಪೀಟರ್ ಗೆದ್ದುಕೊಂಡ."

"ಪೀಟರ್ – ಅಂದ್ರೆ ಎಂ.ಆರ್.ಜಿ."

"ಹೌದು. ಪೀಟರ್ ತನ್ನ ಗ್ಯಾರೇಜಿಂದ ನೇರವಾಗಿ ಬಂದಿದ್ದ. ಅವನ ಪ್ಯಾಂಟ್ ಜೇಬಿನಲ್ಲಿ ಹ್ಯಾಮರ್ರೂ, ರೆಂಚೂ ಇದ್ದದ್ದು ಕಾಣಿಸ್ತಿದ್ವು. ಆರ್.ಪಿ.ಜಿ. ಸಿಂಗ್ರೈಯಂಗಾರಿ ಅದನ್ನ ನೋಡಿಬಿಟ್ಟಿದ್ದ."

ನನ್ನ ಮೈ ಜುಂ ಎಂದಿತು. ಎಲ್.ಎಸ್. ದೆಹಲಿ ಮತ್ತು ಮೈ.ಸಂ. ಮೈಸೂರು – ಎರಡರಲ್ಲಿ ಯಾವುದು ರಿಯಲ್ ಯಾವುದು ಷ್ಯಾಡೋ? – ಅಂತಾ ಕೇಳೋ ಸ್ಥಿತೀಗೆ ಬರ್ತಾ ಇದ್ದ ಹಾಗೆ ಕಾಣಿಸ್ತು.

"ಸಿಂಗ್ನೆಯಂಗಾರಿಗೆ ಯೂತ್ ಸ್ಪೋರ್ಟ್ಸ್, ಫೈನಾನ್ಸ್ ಬಾಬೂಗೆ ಹೋಯ್ತು". ಟಿಪ್ಸಿ ಮುಂದುವರಿದ.

"ಬಾಬೂ ಹೇಗಯ್ಯ ಕ್ಯಾಬಿನೆಟ್‌ನಲ್ಲಿರೋಕೆ ಸಾಧ್ಯ? ನಮದು ಆಪೋಸಿಷನ್ ಅಲ್ವೆ?" ಕೇಳಿದೆ.

"ಪಾಂಡು – ನಮ್ಮ ಮುಟ್ಠಾಳ್ರು ಆ ಸಮಯದಲ್ಲಿದ್ದ ಸ್ಟೇಜ್‌ನಲ್ಲಿ ನಿನ್ನ ಗ್ರೂಪ್ನೆಲ್ಲಾ ಡ್ರಿಂಕ್ಸ್‌ನಲ್ಲಿ ಕೊಚ್ಚಿಕೊಂಡು ಹೋಗಿದ್ವು. ಬಾಬೂನ ಎಲ್ರೂ ಸೇರ್ಕೊಂಡು ಹೊಗಳಿದ್ರೂ ಹೊಗಳಿದ್ದೇ. ನೈಸ್ ಛಾಪ್ – ಫ್ಯಾನ್ಸಿ ಸ್ಟೋರ್ ಜನರು – ದಿಲ್‌ದಾರ – ನವಾಬಿ ದೌಲತ್ ನಡೆಸಬಲ್ಲ ಅಂತ ಬಾಬೂನ ಅಟ್ಟಕ್ಕೇರಿಸಿದರು. ಬಾಬೂ ಹೇಗೂ ಇರಲಿಲ್ಲ ಮೀಟಿಂಗ್‌ನಲ್ಲಿ. ಅವನ ತಮ್ಮಂದ್ರು ಷಬ್ಬೀರು ಬಷೀರು ತುಂಬಾ ಖುಷಿ ಪಟ್ಟಬಿಟ್ರು. ಬಷೀರ್ ಘಜಲ್ ಹಾಡ್ದ. ಷಬೀರ್ ವ್ಹಿಸಲ್ ಸಾತಿ ಕೊಟ್ಟ"

"ಅಯ್ಯೋ – ಮಿಸ್ ಮಾಡಿಬಿಟ್ಟೆನಲ್ಲಾ! – ಮುಂದೆ?"

"ಇಬ್ರೂ ಆಮೇಲೆ ಒಂದು ಫುಲ್ ಬಾಟ್ಲು ಓಪನ್ ಮಾಡ್ಬಿಟ್ರು. ಕೋಳಿ ಕೂಗೋ ಸಮಯ ಆಗ–"

"ಸರಿ – ನಾಳೆ ಬಾಬೂ ಕಾಲಿಂದ ವದೆ ತಿಂತಾರೆ – ಆಮೇಲೆ?"

"ಭಾನ್‌ಸಿಂಗ್ – ಫಾರಿನ್ ಮಿನಿಸ್ಟ್ರು. ಆ ಮಿನಿಸ್ಟ್ರೀಲಿ ಆಗ್ತಿರೋ ಅಲಾಲ್‌ಟೋಪೀನ ವಾಚ್ ಮಾಡ್ತಾ ಅವನಿದ್ದುಬಿಟ್ರೆ ನಮಗೆ ಅವನ ಕಾಟ ಸ್ವಲ್ಪವಾದ್ರೂ ತಪ್ಪುತ್ತೇ, ಅಂತ ಪೀಟರ್ರೇ ಪ್ರಪೋಸ್ ಮಾಡ್ದ. ಎಲ್ರೂ ಒಪ್ಪಿದೆವು. ನಿನ್ನ ಫ್ರೆಂಡ್ – ಹುಣಸೂರು ಶೀನಿ ರೈಲ್ವೇ ಮಿನಿಸ್ಟ್ರು.."

ನನಗಾಶ್ಚರ್ಯವಾಯ್ತು. ಶೀನಿ ಬಂದೇ ಇರ್ಲಿಲ್ಲ.

"ಶೀನಿ ಎಲ್ಲಿದ್ದ?"

"ಇನ್ ಅಬ್ಸೆನ್ಸಿಯಾ ಸೆಲೆಕ್ಟ್ ಆದ. ನಿಂಗೆ ಜ್ಞಾಪ್ಕ ಇದೆಯಾ? ಇದೇ ಶೀನಿ – ಭೂಮಿ ಗುಂಡಾಗಿದೇಂತ ಪ್ರೂವ್ ಮಾಡೋಕೆ ಮೈಸೂರಿಂದ ಅರಸೀಕೆರೆ ರೈಲು ಹತ್ತಿ ಅಲ್ಲಿಂದ ಬೆಂಗಳೂರು ಮೂಲ್ಕ ವಾಪಸ್ ಮೈಸೂರಿಗೆ ಬರೋಕೆ ಟ್ರೈ ಮಾಡಿದ್ದ. ಆ ಸಾಧನೆ ಶೀನೀಗೆ ರೈಲ್ವೆ ಪೋರ್ಟ್ ಫೋಲಿಯೋ ಕೊಡಿಸ್ತು."

ನಾನು ಟಿಪ್ಸಿ – ಮೈಗಳ್ಳರ ಸಂಘದ ಹೆಡ್ ಕ್ವಾರ್ಟರ್ಸ್ ಗೇಟ್ ಹತ್ರ ಬಂದಿದ್ವು.

“ಡಿಫೆನ್ಸ್ - ಎಜುಕೇಷನ್ನು-ಹೆಲ್ತು-”

“ನಮ್ಮ ಸಂಘದ ಕಬಡ್ಡಿ ಲಾಬಿಗೆ ಬಗ್ಗ ತಾನೇ ಹೆಡ್ಡು? ಅವನೇ ಡಿಫೆನ್ಸ್‌ಗೆ ಸರಿ ಅಂತ ನಿರ್ಧರಿಸಿದೆವು. ಎಜುಕೇಷನ್ನು ಹೆಲ್ತು ಹ್ಯಾಂಡಲ್ ಮಾಡೋರಿಗೆ ಆ ವಿಷಯಗಳ ಬಗ್ಗೆ ತಿಳುವಳಿಕೆ ಅಗತ್ಯವಿಲ್ಲಾಂತ - ಪಿ.ಎಂ.ಗೇ ಅವುಗಳ ಛಾರ್ಜು ವಹಿಸಿದೆವು.

“ಭಗ-----ಸ್ಪೆಂಡಿಡ್ ಟಿಪ್ಸಿ! ಬಗ್ಗನಿಗೆ ಡಿಫೆನ್ಸು, ಎಜುಕೇಷನ್ನು, ಹೆಲ್ತು ಅನ್ನು”

“ಆ ಥರಾ ಡಿಸೈಡ್ ಮಾಡಿ ಮೀಟಿಂಗ್ ಕೂಡ್ಲೇ ಕ್ಲೋಸ್ ಮಾಡಿದೆವು.”

ಮೈಗಳ್ಳರ ಸಂಘದ ಕಾಂಪೌಂಡ್‌ನಲ್ಲಿ ಸಂಘದ ಮೇಜು ಕುರ್ಚಿಗಳು ಚಿಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಸ್ವಲ್ಪ ದೃಷ್ಟಿಸಿ ನೋಡಿದಾಗ ಬೇರರ್ ಮುತ್ತಣ್ಣ ಇಬ್ಬರು ಕೂಲಿಗಳ ಸಹಾಯದಿಂದ ಕ್ಲೀನಿಂಗ್ ಕೆಲ್ಸದಲ್ಲಿ ತೊಡಗಿದ್ದ. ವರಾಂಡಾದಿಂದ ಇಬ್ಬರು ಕಣ್ಣುಗಳುಜ್ಜಿಕೊಳ್ತಾ ಮೆಟ್ಲುಗಳನ್ನ ಹುಡುಕ್ತಾ ಇಳೀತಿದ್ರು.

ಪಾಂಡು, ವೆಂಕು ಕಿಟ್ಟಿ! ಮುಟ್ಠಾಳ್ರು ರಾತ್ರಿ ಇಲ್ಲೇ ಬಿದ್ದಿದ್ರೂಂತ ಕಾಣುತ್ತೆ - ಬಾ - ನಾವು ಅವರ ಕಣ್ಣಿಗೆ ಬೀಳೋದು ಬೇಡ ಪಾಪ” ಅಂತ ಟಿಪ್ಸಿ ನನ್ನನ್ನು ಬೇವಿನ ಮರದ ಹಿಂದಕ್ಕೆ ಎಳ್ಕೊಂಡ.

ವೆಂಕು ಕಿಟ್ಟಿ ಗೇಟಿಂದ ಹೊರಗೆ ಹೋದಮೇಲೆ ನಾವು ಮುತ್ತಣ್ಣನಿಂದ ವಿಷಯ ತಿಳ್ಕೊಂಡ್ವು.

“ಬಗ್ಗಾ ಸಾರ್ ಒಳ್ಗಡೆ ಟೇಬಲ್ ಮೇಲೆ ಮಲಗಿದ್ದಾರೆ. ಎಬ್ಬಿಸ್ಬೇಕಾ?” ಅಂದ.

“ಬೇಡಪ್ಪಾ - ಪಿ.ಎಂ.ನ ಡಿಸ್ಟರ್ಬ್ ಮಾಡಬಾರ್ದು” ಅಂತ ಹೇಳಿ ನಾನೂ ಟಿಪ್ಸಿ ನಜರ್‌ಬಾದ್ ಕಡೆ ಹೊರಟೆವು.

“ಟಿಪ್ಸಿ, ಇನ್ನು ಮುಂದೆ ನಮ್ಮ ಮೈಗಳ್ಳ ಸಂಘ ದೆಹಲೀನ ವಾಚ್ ಮಾಡ್ಬೇಕೋ ಅಥವಾ ದೆಹಲಿ ಮೈಗಳ್ಳರ ಸಂಘಾನ ವಾಚ್ ಮಾಡ್ಬೇಕೋ?” ಕೇಳಿದೆ.

“ಯಾವುದು ಷ್ಯಾಡೋ ಕ್ಯಾಬಿನೆಟ್ಟೋ ಅದೇ ವಾಚ್‌ಮನ್ನು” ಅಂದ.

ಜಾನ್‌ಮೇಜರ್‌ನ ಕೇಳಿದ್ದರೂ ಇದೇ ಉತ್ತರ ಬಂದಿರೋದು.

---

# ಬಸ್ಸಿನಲ್ಲಿ ಫಿಸಿಯೋಥೆರಪಿ

ಎಸ್.ಎನ್. ಶಿವಸ್ವಾಮಿ

ಹಿಂದೊಂದು ಕಾಲವಿತ್ತು. ಇದೇ ಬೆಂಗಳೂರಿನಲ್ಲೇ ಜನರು ನಿರ್ಭಯರಾಗಿ ಬಸ್ಸುಗಳಲ್ಲಿ ಓಡಾಡುತ್ತಿದ್ದರು. ಮೊಟ್ಟ ಮೊದಲಾಗಿ ಬೆಂಗಳೂರಿನಲ್ಲಿ ಬಸ್ಸುಗಳ ಪರಿಚಯವಾದಾಗ ಆಗ ಈಗಿನ ಹಾಗೆ ರಸ್ತೆಗಳ ತುಂಬ ಬಸ್ಸುಗಳೇ ಅಟ್ಟಹಾಸ ಮಾಡುತ್ತಿರಲಿಲ್ಲ. ಬೆರಳೆಣಿಕೆಯ ಸಂಖ್ಯೆಯಲ್ಲಿ ಬಸ್ಸುಗಳನ್ನು ಹೊಂದಿದ್ದ ಒಂದು ಖಾಸಗಿ ಕಂಪೆನಿ ಈ ಊರಿನ ಮೂರು ನಾಲ್ಕು ಲಕ್ಷ ಪುರ ಜನರಿಗೆ ಮೊಟ್ಟ ಮೊದಲಿಗೆ ಮೋಟಾರು ಸೌಲಭ್ಯ ಒದಗಿಸಿತ್ತು. ಆ ಬಸ್ಸುಗಳನ್ನು ನಿಧಾನವಾಗಿ ಅಲುಗಾಟವಿಲ್ಲದೆ ಓಡಿಸುವುದಲ್ಲದೆ, ಡ್ರೈವರುಗಳು ಯಾವ ತಲೆ ಹೋಗುವ ಅವಸರವೂ ಇಲ್ಲದೆ ಪ್ರಯಾಣಿಕರ ಹಿತವನ್ನೇ ಮನಸ್ಸಿನಲ್ಲಿಟ್ಟು, ಅಲ್ಲಲ್ಲಿ ಹಿಂತಿರುಗಿ ನೋಡಿಕೊಳ್ಳುತ್ತ, ಎಲ್ಲರೂ ಹತ್ತಿದರೋ ಇಳಿದರೋ ಎಂಬುದನ್ನು ಗಮನಿಸುತ್ತ, ತಿರುವುಗಳಲ್ಲಿ ಮಂದಗತಿಯಲ್ಲಿ ಹೋಗುತ್ತ, ಸಾವಧಾನವಾಗಿ ಗಾಡಿಗಳನ್ನು ನಡೆಸುತ್ತಿದ್ದರು. ಅಂತೂ ಪ್ರಯಾಣಿಕರ ಅನುಕೂಲಕ್ಕಾಗಿಯೇ ಓಡಾಡುತ್ತಿದ್ದ ಬಸ್ ಏರ್ಪಾಡು ಇದ್ದ ಕಾಲವೂ ಒಂದಿತ್ತು.

ಈಗಿನ ಈ ಮಹಾನಗರದ ಕತೆಯೇ ಬೇರೆ. ನನಗೆ ಈಗಿನ ಸಿಟಿ ಬಸ್‌ಗಳಲ್ಲಿ ಓಡಾಡಿ ಸಾಕಷ್ಟು ಅನುಭವವಿರುವುದರಿಂದ ನನ್ನದೇನೂ ಈ ವ್ಯವಸ್ಥೆಯ ಬಗ್ಗೆ ದೂರಿಲ್ಲ. ಬೊಂಬಾಯಿ, ಕಲ್ಕತ್ತಾಗಳಂಥ ದಟ್ಟ ಜನಸಂದಣಿಯ ಜತೆಗೂ ಸೇರಿಕೊಂಡು ಬಸ್ ಪ್ರಯಾಣ ಮಾಡಿ ಪಳಗಿರುವ ನನಗೆ ಇಲ್ಲಿನ ಬಸ್ಸುಗಳು ಜನರನ್ನು ಉಪ್ಪಿನಕಾಯಿ ಸೀಸೆಯಲ್ಲಿನ ಹೋಳುಗಳಂತೆ ತುಂಬಿಕೊಂಡು ಹೋಗುವುದನ್ನು ನೋಡಿ ಆಶ್ಚರ್ಯವೇನೂ ಆಗುವುದಿಲ್ಲ. ಅಷ್ಟೇ ಅಲ್ಲ, ಈ ನೂಕು ನುಗ್ಗಲಿಗೆ ಅನೇಕ ವೇಳೆ ನಾನೂ ಕಾರಣನಾಗಿರುತ್ತೇನೆನ್ನುವುದನ್ನೂ ಒಪ್ಪಿಕೊಳ್ಳುತ್ತೇನೆ. ಯಾಕೆಂದರೆ ನೂಕು ನುಗ್ಗಲಿಲ್ಲದ ಸಮಯದಲ್ಲಿ ನನಗೆ ಬಸ್ ಪ್ರಯಾಣದ ಅವಶ್ಯಕತೆಯೇ ಇರುವುದಿಲ್ಲ. ಅತಿ ಹೆಚ್ಚು ಒತ್ತಡದ ಸಮಯದಲ್ಲೇ ನಾನೂ ಓಡಾಡಬೇಕಾಗಿದೆ.

ಪೀಕ್ ಅವರ್ ಬಸ್ ಸವಾರಿ ಮಾಡುವವರು ಕೂತುಕೊಂಡು ಹೋಗುವ ಪ್ರಶ್ನೆಯೇ ಇರುವುದಿಲ್ಲವಲ್ಲ! ನಾನಂತೂ ಬಸ್ ನಿಲ್ದಾಣದಿಂದ ದೂರದ ಮಧ್ಯದಾರಿಯಲ್ಲಿ ಬಸ್ ಹತ್ತಬೇಕು. ಫುಟ್‌ಬೋರ್ಡ್‌ನ ಮೇಲೆ ನಿಂತು ಪ್ರಯಾಣ ಮಾಡುವುದಕ್ಕೆ ಹೆದರಿಕೆ. ಆದರೆ ಅದರ ಮೇಲೆ ತೂಗಾಡುವವರು ನನ್ನನ್ನು ಹಿಡಿದು ಹೇಗೋ ಒಳಕ್ಕೆ ತೂರಿಸಿಬಿಡುತ್ತಾರೆ. ಅಷ್ಟೆ. ಆಮೇಲೆ ಕೂತದ್ದೇ ನೆನಪಿಲ್ಲ. ಹಾಗೆ ನೋಡಿದರೆ ಬಸ್ಸುಗಳಲ್ಲಿ ಸೀಟುಗಳಿರುತ್ತವೆಯೋ ಅನ್ನುವುದು ನನಗೆ ತಿಳಿದದ್ದೇ ಒಂದು ಆಕಸ್ಮಿಕ. ಒಂದು ದಿನ ತಪ್ಪಿ ಬೇರೆ ಮಾರ್ಗದ ಬಸ್ ಹತ್ತಿ ಸ್ವಲ್ಪ ದೂರ

ಹೋದ ಮೇಲೆ ಖಾಲಿ ಸೀಟೊಂದು ನನ್ನ ಕಣ್ಣಿಗೆ ಬಿದ್ದು ಬಸ್ಸಿನ ಒಳಸ್ವರೂಪದ ಅರಿವಾಯಿತು.

ನಿಂತುಕೊಂಡೇ ತುಂಬಿದ ಬಸ್ಸಿನಲ್ಲಿ ಪ್ರಯಾಣ ಮಾಡುವ ನನಗೆ ಘ್ರಾಣೇಂದ್ರಿಯ ಬಲು ಚುರುಕು. ನಾನು ಸರಿಯಾದ ಮಾರ್ಗದಲ್ಲಿ ಹೋಗುತ್ತಿದ್ದೇನೋ, ಇಳಿಯಬೇಕಾದ ಸ್ಥಳ ಹತ್ತಿರವಾಯಿತೋ, ಬಸ್ ನಿಂತದ್ದು ನನ್ನ ನಿಲುಗಡೆಯೋ ಅನ್ನುವುದನ್ನೆಲ್ಲ ನಾನು ನಿಂತಲ್ಲಿಂದ ನೋಡಲಾರೆ. ಆಯಾ ಪ್ರದೇಶಗಳಲ್ಲಿ ಹೊಮ್ಮುವ ವಾಸನೆಗಳ ಗುರುತಿನಿಂದಲೇ ನಾನು ಒಂದು ಸಲವಾದರೂ ತಪ್ಪದೆ ಸರಿಯಾಗಿ ಇಳಿದುಕೊಳ್ಳುತ್ತ ಬಂದಿದ್ದೇನೆ.

"ಇಂಥಾ ಬಸ್ಸುಗಳಲ್ಲಿ ದಿನವೂ ಸಂಚಾರ ಮಾಡುತ್ತಾ ಬಂದಿರುವ ನೀವು ಬಹಳ ದೃಢಕಾಯರಾದ ಪೈಲ್ವಾನರೇ ಆಗಿರಬೇಕು?" ಅಂತ ನೀವು ನನ್ನನ್ನು ಕೇಳಬಹುದು. ಇಲ್ಲೇ ಸ್ವಾರಸ್ಯ ಇರೋದು! ನನ್ನ ಆರೋಗ್ಯವನ್ನೆಲ್ಲ ನಾನು ಈಚೆಗೆ ಸಂಪಾದಿಸಿದೆ. ಅಂದರೆ, ಹಿಂದಿನ ಪ್ರೈವೇಟ್ ಬಸ್ಸುಗಳ ಕಾಲದಲ್ಲಿ ಸುಖ ಪ್ರಯಾಣವನ್ನೇ ಮಾಡುತ್ತ ನಾನೊಂದು ಸುತ್ತು ಅನಾರೋಗ್ಯಕರ ಹೊಟ್ಟೆ ಬರೆಸಿದ್ದುಂಟು. ಆದರೆ ಈಗ ನನ್ನ ಮೈಯಲ್ಲಿ ಅಂಥಾ ಹೆಚ್ಚುವರಿ ಬೆಳವಣಿಗೆಗೆ ಅವಕಾಶವೇ ಇಲ್ಲ. ಹಿಂದೆ ನನ್ನನ್ನು ಸತಾಯಿಸುತ್ತಿದ್ದ ನೆಗಡಿ, ಕೆಮ್ಮು, ಉದರಶೂಲೆ, ಕೈಕಾಲು ಊತ, ಮೊದಲಾದ ವ್ಯಾಧಿಗಳು ಈಗ ಸುಳಿವೇ ಇಲ್ಲದೆ ಮಾಯವಾಗಿವೆ. ಇದಕ್ಕಾಗಿ ನಾನು ಟಾನಿಕ್, ಗುಳಿಗೆ, ಕಷಾಯಗಳ ದಾಸನಾಗಿಬಿಟ್ಟೆ ಅಂದುಕೊಳ್ಳಬೇಡಿ. ನನ್ನ ಆರೋಗ್ಯ ಸುಧಾರಣೆಗೆ ಯಾವ ಅಲೋಪಥಿ, ಆಯುರ್ವೇದ, ಹೋಮಿಯೋಪಥಿ, ಡಯಟಿಂಗ್ ಈ ಯಾವ ಪದ್ಧತಿಗೂ ನಾನು ಶರಣಾಗಲಿಲ್ಲ. ಫಿಸಿಯೋಥೆರಪಿ ಒಂದೇ ನನ್ನ ನೆರವಿಗೆ ಬಂದದ್ದು.

ಫಿಸಿಯೋಥೆರಪಿ ಒಂದು ಪುರಾತನ ವೈದ್ಯಕೀಯ ಪದ್ಧತಿ. ಬಿಸಿನೀರ ಬುಗ್ಗೆ ಸ್ನಾನ, ವ್ಯಾಯಾಮ ಸಾಧನೆ, ಅಂಗಮರ್ದನ, ಶಾಖ, ತೀಕ್ಷ್ಣ ಬೆಳಕುಗಳ ಪ್ರಯೋಗ, ಎಲೆಕ್ಟ್ರಿಸಿಟಿ, ಎಕ್ಸ್‌ರೇಗಳ ಸಹಾಯದಿಂದ ನಾನಾ ತರಹದ ಫಿಸಿಯೋಥೆರಪಿ ಪರಿಹಾರ ನೀಡಬಲ್ಲದು ಅನ್ನೋದನ್ನ ನಾನು ತಿಳಿದುಕೊಂಡಿದ್ದೆ. ಮೇಲಾಗಿ, ನನ್ನನ್ನು ಪದೇ ಪದೇ ಪೀಡಿಸುತ್ತಿದ್ದ ಸಣ್ಣಪುಟ್ಟ ಖಾಯಿಲೆಗಳು, ನನ್ನ ತುಸು ಡುಬ್ಬು ಹೊಟ್ಟೆ, ದುರ್ಬಲತೆಗಳ ನಿವಾರಣೆಗೆ ಫಿಸಿಯೋಥೆರಪಿ ಒಂದು ಉತ್ತಮ ಉಪಾಯ ಅಂತ ನನ್ನ ವೈದ್ಯ ಮಿತ್ರರೊಬ್ಬರು ಸೂಚಿಸಿದರು. ನನಗಾದರೋ ಔಷಧಿಗಳು, ಮಸಾಜ್, ಇಂಜೆಕ್ಷನ್‌ಗಳೆಂದರೆ ದಿಗಿಲು. ನನ್ನಲ್ಲಿ ನೋವು ಸಹಿಸುವ ಶಕ್ತಿ ಬಲು ಕಡಿಮೆ. ಹಲ್ಲು ಕೀಳುವಾಗ ನೋವು ತಿಳಿಯದಿರಲಿ ಅಂತ ಒಸಡಿಗೆ ಒಂದು ಇಂಜೆಕ್ಷನ್ ಕೊಡುತ್ತಾರಲ್ಲವೆ? ಆ ಇಂಜೆಕ್ಷನ್ನಿನ ನೋವು ತಿಳಿಯದ ಹಾಗೆ ಅದಕ್ಕೂ ಮುಂಚೆ ಇನ್ಯಾವುದಾದರೂ ನೋಯದ ಇಂಜೆಕ್ಷನ್ ಕೊಡಿ ಅಂತ ನಾನು ದಂತವೈದ್ಯರನ್ನು ಬೇಡಿಕೊಂಡದ್ದುಂಟು. ಡಾಕ್ಟರುಗಳು "ನಿನಗೆ ವಯಸ್ಸೇರುತ್ತ ಬಂದ ಹಾಗೆಲ್ಲ ನೋವು ಅನುಭವಿಸುವ ಸಂದರ್ಭಗಳು

ಹೆಚ್ಚಾಗುತ್ತಲೇ ಬರಬಹುದು. ಅವನ್ನೆಲ್ಲ ಎದುರಿಸೋದಕ್ಕೆ ಈಗಿನಿಂದ ಅಭ್ಯಾಸ ಮಾಡಿಕೊಳ್ಳದೆ ಹೀಗೆ ಹೆದರುಪುಕ್ಕಲನಾಗಿದ್ದೀಯಲ್ಲ" ಅಂತ ನನ್ನನ್ನು ಲೇವಡಿ ಮಾಡಿದ್ದೂ ಉಂಟು.

ಹೀಗಿದ್ದ ನಾನು ಸಹಿಷ್ಣುತೆಯನ್ನು ಬೆಳೆಸಿಕೊಂಡದ್ದು ಬಸ್ ಸಹಾಯದಿಂದಲೇ! ಅದಕ್ಕೆ ಅವಶ್ಯಕವಾಗಿದ್ದ ಫಿಸಿಯೋಥೆರಪಿ ಚಿಕಿತ್ಸೆಯನ್ನು ಪಡೆದದ್ದು, ಪೀಕ್ ಅವರ ಬಸ್ ಪ್ರಯಾಣದ ಮೂಲಕವೇ.

ಬಸ್ಸಿನಲ್ಲಿ ಪುಕ್ಕಟೆ ಫಿಸಿಯೋಥೆರಪಿ ಹೊಂದ ಬಯಸುವವರಿಗೆ ಒಂದೆರಡು ಪ್ರಾಸ್ತಾವಿಕ ಸೂಚನೆಗಳಿವೆ. ಯಾವ ಮಾರ್ಗದ ಬಸ್ಸಿನಲ್ಲಿ ಹೋಗಬೇಕು, ಬಸ್ಸಿನ ಲಕ್ಷಣಗಳು ಹೇಗಿರಬೇಕು, ಅನ್ನುವುದಕ್ಕೆ ಸಂಬಂಧಪಟ್ಟ ಸೂಚನೆಗಳು: ಮೊದಲನೆಯದಾಗಿ, ನೀವು ಆರಿಸಿಕೊಳ್ಳುವ ಮಾರ್ಗ ರಾಜಮಾರ್ಗವಾಗಿರಬಾರದೆನ್ನುವುದು ಮುಖ್ಯ. ಯಾವ ಅತಿಥಿಗೂ ತೋರಿಸದೆ ಬೆಂಗಳೂರಿನ ನಾಗರಿಕರ ಉಪಯೋಗಕ್ಕೆ ಮಾತ್ರ ಮೀಸಲಾಗಿರುವ ಎಷ್ಟೋ ಉದ್ದುದ್ದದ ರಸ್ತೆಗಳಿವೆ. ಅವುಗಳಲ್ಲಿ ಯಾವುದನ್ನಾದರೂ ನೀವು ಆರಿಸಿಕೊಳ್ಳಬಹುದು. ರಸ್ತೆ ಟಾರು ಕಂಡ ರಸ್ತೆಯಾದರೂ ದುರಸ್ತಿ ಕಾಣದ ರಸ್ತೆಯಾಗಿರಬೇಕು. ಹೊಂಡಗಳು ಹೇರಳವಾಗಿರಬೇಕು. ಹೊಂಡಗಳಿಲ್ಲದಿದ್ದರೂ ಅವುಗಳಿಗೆ ತೇಪೆ ಹಾಕಿದ ಕಡೆಯೆಲ್ಲಾ ಡುಬ್ಬಗಳಿರುತ್ತವಲ್ಲ, ಅವೇ ಸಾಕು. ನಿಮ್ಮ ಹಾದಿಯಲ್ಲಿ ಸಾಕಷ್ಟು ನಿಲುಗಡೆಗಳೂ, ಸಂಚಾರ ತಡೆಗಳೂ ಇದ್ದೇ ಇರಬೇಕು. ರಸ್ತೆಯಲ್ಲಿ ಅಡಿಗಡಿಗೆ ವೇಗ ನಿರೋಧಕ ಉಬ್ಬುಗಳಂತೂ ಇದ್ದೇ ಇರಬೇಕು. ಇಂಥಾ ಉಬ್ಬುಗಳು ಕೆಲವು ಸಲ ಒಟ್ಟೊಟ್ಟಿಗೆ ಕಾರುಗೇಟೆಡ್ ಷೀಟುಗಳ ಹಾಗೆ ನಿರ್ಮಿತವಾಗಿರುತ್ತವೆ. ಹೀಗಿರುವುದು ಇನ್ನೂ ಲೇಸು. ಇಂಥ ಅಡಚಣೆಗಳೆಲ್ಲ ಬಸ್ಸಿನ ದಾರಿಯುದ್ದಕ್ಕೂ ಇರತಕ್ಕದ್ದು ನಿಮ್ಮ ಫಿಸಿಯೋಥೆರಪಿಗೆ ಅತ್ಯವಶ್ಯಕ.

ಹಾಗೇ ನೀವು ನಿಮ್ಮ ನಿತ್ಯ ಪ್ರಯಾಣಕ್ಕೆ ಆರಿಸಿಕೊಳ್ಳುವ ಬಸ್ ತಕ್ಕಮಟ್ಟಿಗೆ ಹಳೆಯದಾಗಿರಬೇಕು. ಲಗ್ಜುರಿ ಸೆಮಿ ಲಗ್ಜುರಿ, ಬಸ್ಸುಗಳು ನಾಲಾಯಕ್ಕು. ಗಾಡಿ ಎಷ್ಟು ಬಡಕಲೋ ಅಷ್ಟು ನಿಮಗೆ ಅನುಕೂಲ. ಹತ್ತಲು ಇಳಿಯಲು ಸುಲಭವಾಗಿರದೆ ಮೆಟ್ಟಲುಗಳು ಎತ್ತರವಾಗಿರಲಿ. ಇಂಥಾ ಮಾರ್ಗ, ವಾಹನ, ಎರಡನ್ನೂ ಹುಡುಕಿಕೊಂಡು ಪೀಕ್ ಅವರಿನಲ್ಲಿ ನಾನು ಸವಾರಿ ಮಾಡುವ ಹಾಗೆ ದಿನಕ್ಕೊಂದು ಸಲ ತಪ್ಪದೆ ಪ್ರಯಾಣ ಮಾಡಿದರೆ ನಿಮ್ಮ ಫಿಸಿಯೋಥೆರಪಿ ಕೈಗೂಡಿದ ಹಾಗೇ ಲೆಕ್ಕ. ಭಾನುವಾರ, ರಜಾದಿನಗಳಲ್ಲೂ ನಿಮ್ಮ ಮಾಮೂಲು ಮಾರ್ಗದಲ್ಲಲ್ಲದಿದ್ದರೂ ಯಾವುದಾದರೂ ತುಂಬಿ ತುಳುಕುವ ಬಸ್ಸಿನಲ್ಲಿ ಒಮ್ಮೆ ನೇತಾಡುತ್ತ ಹೋಗಿಬರುವುದು ನಿಮ್ಮ ಚಿಕಿತ್ಸೆಗೆ ಪೂರಕವಾಗುತ್ತದೆ.

ಬಸ್ಸಿನಲ್ಲಿ ನನಗೆ ಸಂದ ಫಿಸಿಯೋಥೆರಪಿಯ ಅನುಕೂಲಗಳು ಒಂದೇ ಎರಡೇ? ನನ್ನ ಮಿನಿ ಬೊಜ್ಜು ಕರಗಿದ್ದು ಹಾಗಿರಲಿ, ನನ್ನ ದೈನಂದಿನ ವ್ಯಾಯಾಮ ಬಸ್ಸಿನ

ಎತ್ತರದ ಮೆಟ್ಟಿಲುಗಳನ್ನು ಹತ್ತಿ ಇಳಿಯುವುದರಿಂದಲೇ ಪೂರೈಸಿತು. ಈಗ ನನ್ನ ಕಾಲಿನ ಮಾಂಸಖಂಡಗಳು ಗಟ್ಟಿಯಾಗಿವೆ. ಕತ್ತೆಯನ್ನೂ ಮೀರಿಸುವ ಹಾಗೆ ನಾನೀಗ ಒದೆಯಬಲ್ಲೆ. ಡಾಕ್ಟರುಗಳು ತಮ್ಮ ರೋಗಿಗಳಿಗೆ ದಿನವೂ ಇಂತಿಷ್ಟು ದೂರ ನಡೀರಿ ಅಂತ ಉಪದೇಶ ಮಾಡುತ್ತಾರಷ್ಟೆ? ಬಸ್ ಓಡಿದು ಆಫೀಸಿಗೆ ಹೋಗುವುದರಲ್ಲೇ ನನಗೆ ಈ ವಾಕಿಂಗ್ ಮಾಡಿದ ವ್ಯಾಯಾಮ ಆಗಿರುತ್ತೆ.

ಹೀಗೆ ಫಿಸಿಯೋಥಿರಪಿ ಚಿಕಿತ್ಸೆ ನಿರಾಯಾಸವಾಗಿ ಪ್ರಾಪ್ತವಾಗಿರುವಾಗ ನನಗೆ ಯೋಗಾಭ್ಯಾಸ, ಹೆಲ್ತ್‌ಕ್ಲಬ್ ಮೊದಲಾದ ವೈದ್ಯೋಪಚಾರಗಳೇ ಬೇಕಾಗಿಲ್ಲ. ಬಸ್ಸಿನಲ್ಲಿ ನಿಲ್ಲುವ ಹಲವಾರು ಭಂಗಿಗಳು ಒಂದಲ್ಲ ಒಂದು ಯೋಗ ಮುದ್ರೆಯನ್ನೇ ಹೋಲುತ್ತವೆ. ಕೈಗಳನ್ನು ಪಕ್ಕಕ್ಕೆ ಇಳಿಬಿಡಲು ಅಥವಾ ತುಡುಸಿಕೊಳ್ಳಲು ಸಾಧ್ಯವಾಗದೆ ಮೇಲೆತ್ತಿ ನಿಲ್ಲಬೇಕಾದಾಗ, ಇನ್ನೊಂದು ಕಾಲನ್ನು ನೆಲಕ್ಕೂರಲು ಪ್ರಯತ್ನಿಸಿದಾಗ ಅದು ಕೆಳಗೆ ಕೂತ ಯಾರಾದರೂ ವಯಸ್ಸಾದವರ ತಲೆ ತುಳಿದು ಷಾಕ್ ಹೊಡೆದಂತಾಗಿ ಒಂದೇ ಕಾಲಲ್ಲಿ ನಿಂತು ಪ್ರಯಾಣ ಮಾಡಿದಾಗ, ತೂಗುಪಟ್ಟಿ ಬಲವಾಗಿ ಹಿಡಿದು ಅದರ ಮೇಲೆ ದೇಹದ ಭಾರ ಹಾಕಿ ಸಿದ್ಧಯೋಗಿಯಂತೆ ತೇಲಾಡುವಾಗ, ನಾಲ್ಕೂ ಕಡೆಯ ಸಹಪ್ರಯಾಣಿಕರ ಅಸಮ ಒತ್ತಡದಿಂದ ಮೈ ಡೊಂಕು ಡೊಂಕಾಗಿ ಟ್ವಿಸ್ಟ್ ಅಥವಾ ಬ್ರೇಕ್ ಡಾನ್ಸ್‌ನಲ್ಲಿ ತೊಡಗಿದಾಗ ಯಾವ ಯೋಗಾಸನ ದೀಪಿಕೆಯಲ್ಲೂ ಕಾಣದ ಹೊಸ ಆಸನಗಳನ್ನು ನಾವು ಕಲಿತುಕೊಳ್ಳುತ್ತಲೇ ಬರುತ್ತೇವೆ. ಇದರಿಂದ ನನ್ನ ಅವಯವಗಳಿಗೆ, ಸ್ನಾಯುಗಳಿಗೆ ಲಭ್ಯವಾಗಿರುವ ಸಹಾಯ ಅಷ್ಟಿಷ್ಟಲ್ಲ.

ನನ್ನ ಬಸ್ಸು ಸರಕ್ಕನೆ ಬ್ರೇಕ್ ಹಾಕಿ ನಿಲ್ಲುವುದರಿಂದ, ಯಾವ ಮುನ್ನೆಚ್ಚರಿಕೆಯೂ ಇಲ್ಲದೆ ಜರ್‍ರೆಂದು ಹೊರಡುವುದರಿಂದ, ಪಾಟ್ ಹೋಲ್‌ಗಳ ಮೇಲೆ ಎಗರುವುದರಿಂದ, ಥಟ್ಟನೆ ಗೇರ್ ಬದಲಾಯಿಸುವುದರಿಂದ, ವೇಗತಡೆ ಉಬ್ಬುಗಳನ್ನು ವೇಗವಾಗಿಯೇ ಹಾಯುವುದರಿಂದ ಒಬ್ಬೊಬ್ಬರಿಗೆ ಒಂದೊಂದು ತರಹದಲ್ಲಿ ಫಿಸಿಯೋಥಿರಪಿ ಲಭಿಸಿರುವುದು ನನ್ನ ಗಮನಕ್ಕೆ ಬಂದಿದೆ. ನನ್ನ ಸಹೋದ್ಯೋಗಿಯೊಬ್ಬ ತನಗೆ ಸಂಧಿವಾತವೆಂದು ಸಂದೇಹಪಟ್ಟು ಅದರ ನಿವಾರಣೆಗೆ ನನ್ನ ಸಲಹೆ ಕೇಳಿದ. ಅವನು ದಿನವೂ ಪ್ರಯಾಣ ಮಾಡುತ್ತಿದ್ದ ಬಸ್ಸನ್ನು ಬಿಡಿಸಿ ನನ್ನ ಬಸ್ ಮಾರ್ಗದಲ್ಲಿದ್ದ ಮೂಳೆ ಡಾಕ್ಟರೊಬ್ಬರ ಬಳಿಗೆ ಅವನನ್ನು ಒಂದು ದಿನ ಕರೆದುಕೊಂಡು ಹೋದೆ. ಬಸ್ಸಿನಿಂದ ಇಳಿಯುವುದಕ್ಕೆ ಮುಂಚೆಯೇ ಅವನು "ಅಯ್ಯೋ, ಇಳೀಬೇಡ. ಆಫೀಸಿಗೆ ಹೊತ್ತಾಯ್ತು, ಹೋಗೋಣ" ಅಂದ. ನಾನು "ಡಾಕ್ಟರನ್ನ ನೋಡಿಕೊಂಡು ಹೋಗೋಣ. ಆಫೀಸಿಗೆ ಇಲ್ಲಿಂದ ದೂರವಿಲ್ಲ. ನಡಕೊಂಡೇ ಹೋಗಬಹುದು" ಅಂದೆ. ಅವನು ತನ್ನ ಸಂಧಿವಾತ ಗುರುತೇ ಇಲ್ಲದ ಹಾಗೆ ಗುಣವಾಗಿದೆಯೆಂದೂ, ನೆಟ್ಟಗೆ ಆಫೀಸಿಗೆ ಹೋಗಲು ತಾನು ಸಿದ್ಧನೆಂದೂ ಹೇಳಿ ಒಂದು ಕ್ಷಣ ನನಗೆ ಭ್ರಮೆ ಹಿಡಿಸಿದ. ನನ್ನ ಬಸ್ಸಿನ ಮಹಿಮೆಗೆ ಒಂದು ಉದಾಹರಣೆ.

ನನ್ನ ಇನ್ನೊಬ್ಬ ಸಹೋದ್ಯೋಗಿ ಯಾವಾಗಲೋ ಮೆಡಿಕಲ್ ಚೆಕಪ್‌ಗೆ ಹೋಗಿದ್ದಾಗ ಅವನ ಜಠರದ ಸ್ಥಳಾಂತರವಾಗಿದೆಯೆಂದು ಎಕ್ಸ್‌ರೇ ಚಿತ್ರ ತೋರಿಸಿತಂತೆ. ಶಸ್ತ್ರ ಚಿಕಿತ್ಸೆಗೆ ಹೋಗಲೋ ಬೇಡವೋ ಅಂತ ಯೋಚಿಸುತ್ತ ಅವನು ನನ್ನ ಸಲಹೆ ಕೇಳಲು ಬಂದ. ನಾನು ಅವನನ್ನು ಕೆಲವು ದಿನ ನನ್ನ ಬಸ್ಸಿನ ಮಾರ್ಗವಾಗಿ ನನ್ನ ಜೊತೆಗೇ ಕರೆದುಕೊಂಡು ಹೋದೆ. ಒಂದೆರಡು ತಿಂಗಳು ಕಳೆಯುವುದರೊಳಗೆ ಇನ್ನೊಂದು ಎಕ್ಸ್‌ರೇ ತೆಗೆಸಿದೆವು. ಬಸ್ಸಿನ ಕುಲುಕಾಟದ ಫಲವಾಗಿ ಅವನ ಜಠರ ಸ್ವಸ್ಥಾನಕ್ಕೆ ಮರಳಿದ್ದು ಕಂಡುಬಂತು.




ನಮ್ಮ ನೆರೆಮನೆಯ ಹುಡುಗಿಯೊಬ್ಬಳಿಗೆ ಮದುವೆ ವಯಸ್ಸು. ಹುಡುಗಿ ಸ್ವಲ್ಪ ದಪ್ಪ. ಅವಳ ತಂದೆ ತಾಯಿಯರು ಅವಳಿಗೆ ಸ್ಕಿಪ್ಪಿಂಗ್, ಜಾಗಿಂಗ್, ಸಾತ್ವಿಕ ಆಹಾರ, ಇತ್ಯಾದಿ ತೆಳ್ಳಗಾಗುವ ಕಾರ್ಯಕ್ರಮ ಹಾಕಿಕೊಟ್ಟರು. ವರಾನ್ವೇಷಣೆಗೆಂದು ಅಲೆದಲೆದು ತಂದೆ ತಾಯಿಯರು ತಣ್ಣಗಾದರೇ ಹೊರತು ಹುಡುಗಿಯ ತೂಕ ಇಳಿಯಲಿಲ್ಲ. ಈ ನಡುವೆ ನಮ್ಮ ಆಫೀಸಿನಲ್ಲಿ ಹಂಗಾಮಿ ಟೈಪಿಸ್ಟ್ ಕೆಲಸವೊಂದು ಖಾಲಿಬಿದ್ದ ಸಂದರ್ಭ ಬಂದು, ನಾನು ಆ ಹುಡುಗಿಗೆ ಆ ಕೆಲಸ ಮಾಡಿಸಿಕೊಟ್ಟೆ. ಹುಡುಗಿಯನ್ನು ನನ್ನ ಜತೆಗೇ ಬಸ್ಸಿನಲ್ಲಿ ಕರೆದುಕೊಂಡು ಹೋಗಿಬರುವ ಏರ್ಪಾಡೂ ಮಾಡಿದೆ. ಮೂರೇ ತಿಂಗಳಲ್ಲಿ ಅವಳು ಬಳುಕುವ ಲತೆಯ ಹಾಗಾಗಿದ್ದಾಳೆ. ಮದುವೆಯೂ ನಿಶ್ಚಯವಾಗಿದೆ. ನಮ್ಮ ಬಸ್ಸಿನ ಡ್ರೈವರನ್ನು ಮರೆಯದೇ ಮದುವೆಗೆ ಆಮಂತ್ರಿಸಲು ನಾನು ಅವರಿಗೆ ಅರಿಕೆ ಮಾಡಿದ್ದೇನೆ.

[ರೇಡಿಯೋ ಭಾಷಣದ ಪಠ್ಯರೂಪ]

---

# ಜಲಂಧರದಲ್ಲಿ ಜಲಜಾಕ್ಷಿ

ನಂದಿನಿ ಕಾಪಡಿ

ನಮ್ಮ ಜಲಜಾಕ್ಷಿ ಜಲಂದರ್ ವಾಸಿ ಜಸವಂತ ಸಿಂಗನನ್ನು ವರಿಸಿದ್ದು ಗೊತ್ತಲ್ಲ? ಜಲಜಾಕ್ಷಿಗೆ ಅಡಿಗೆ ಎಂದರೆ ಜಿಗುಪ್ಸೆ. ಆಲೂ ಕಾ ಪರಾಟಾ, ಮೂಲೀ ರಾಯತಾ, ಸರಸೊಂಕಾ ಸಾಗ್ ಎಂದು ಪ್ರತಿ ದಿನ ಜಸವಂತ ಸಿಂಗ್ ಹೆಂಡತಿಗೆ ರುಚಿ ರುಚಿಯಾಗಿ ಮಾಡಿ ತಿನಿಸುತ್ತಿದ್ದ. ಜಲಜಾಕ್ಷಿ ಗಂಡನ ನಳಪಾಕ ಸವಿಯುತ್ತಾ ದಪ್ಪವಾಗುತ್ತಲೇ ಹೋದಳು. ಜಸವಂತ ಸಿಂಗನಿಗೆ ಕಾಲೇಜಿನಲ್ಲಿ ಲೆಕ್ಚರರ್ ಕೆಲಸ ಸಿಕ್ಕಿದ್ದರಿಂದ ಹೆಂಡತಿಯನ್ನು ಇನ್ನೂ ಜಲಂದರಕ್ಕೆ ಕರೆದುಕೊಂಡು ಹೋಗಲಾಗಿಲ್ಲ.

ಕಡೆಗೂ ದೀಪಾವಳಿ ರಜೆ ಬಂತು. ಹೆಂಡತಿಗೆ ಅಸಲೀ ಪಂಜಾಬಿ ಡ್ರೆಸ್ ಹಾಕಿಸಿಕೊಂಡು ಜಸವಂತ ಸಿಂಗ್ ಮನೆಯತ್ತ ಹೊರಟ. ನಮ್ಮ ಜಲಜಾಕ್ಷಿಯೂ ಕಡಿಮೆಯೇನಿಲ್ಲ. ಇಷ್ಟು ಹೊತ್ತಿಗಾಗಲೇ ಸ್ವಲ್ಪ ಸ್ವಲ್ಪ ಪಂಜಾಬೀ ಭಾಷೆ ಕಲಿತುಬಿಟ್ಟಿದ್ದಳು. ಜಲಂಧರಕ್ಕೆ ಬಂದಾಗ ಅತ್ತೆ ಮಾವನವರ ಕಾಲು ಮುಟ್ಟಿ ಕಣ್ಣಿಗೊತ್ತಿಕೊಂಡಳು. "ಜೀತೇ ರಹೋ ಬೇಟೀ" ಎಂದು ಅತ್ತೆ ಮಾವ ಇಬ್ಬರೂ ಆಶೀರ್ವದಿಸಿ ಹಾರ್ದಿಕವಾಗಿ ಸ್ವಾಗತಿಸಿದರು.

ತನ್ನ ಹಳೆಯ ಬುಲೆಟ್ ಮೋಟರ್ ಬೈಕಿನಲ್ಲಿ ಜಸವಂತ ಸಿಂಗ್ ಹೆಂಡತಿಯನ್ನು ಕರೆದುಕೊಂಡು ಊರೆಲ್ಲಾ ತಿರುಗಾಡಿದ. ಅತ್ತೆಯವರೂ ಸೊಸೆಗೆ ಪ್ರಿಯವಾದದ್ದೆಲ್ಲಾ ಮಾಡಿಹಾಕಿದರು. ಎಂಟು ದಿನ ಮಜವಾಗಿ ಕಳೆದುಹೋಯಿತು. ಆದರೆ ಯಾವುದೂ ಶಾಶ್ವತವಲ್ಲ ಅಂತಾರಲ್ಲಾ; ಹಾಗೆ ಜಲಜಾಕ್ಷಿಯ ಸಂತಸ ಬಹಳ ದಿನ ಉಳಿಯಲಿಲ್ಲ. ಒಂಬತ್ತನೇ ದಿನ ಜಸವಂತ ಸಿಂಗನ ದೊಡ್ಡ ಸೋದರತ್ತೆ ಹಳ್ಳಿಯಿಂದ ಬಂದರು. ವಯಸ್ಸು ಎಪ್ಪತ್ತರ ಮೇಲೆ. ಒಳ್ಳೇ ಧಡೂತಿ ಹೆಂಗಸು. ಜಸವಂತನಂತೂ ತನ್ನ 'ಬುವಾಜಿ'ಯ ತೊಡೆಯ ಮೇಲೆಯೋ ಕುಳಿತುಕೊಂಡು ಅವರು ತಂದಿದ್ದ ಲಾಡುವನ್ನು ತಿಂದುಬಿಟ್ಟ. ಆಕೆಯ ಮನ ಕರಗಿಹೋಯಿತು. ಆದರೆ ಜಲಜಾಕ್ಷಿಯ ಮೇಲೆ ಯಾಕೋ ಅಷ್ಟಕ್ಕಷ್ಟೆ. ಪಂಜಾಬಿಯೇನೋ ಮಾತಾಡುತ್ತಾಳೆ. ಪಂಜಾಬೀ ಪೋಷಾಕನ್ನೂ ಹಾಕುತ್ತಾಳೆ. ತಮ್ಮ ಮುಂದೆ ದುಪ್ಪಟ್ಟವನ್ನು ತಲೆಯ ಮೇಲೆ ಹೊದ್ದುಕೊಂಡೇ ಇರುತ್ತಾಳೆ. ಆದರೆ ತಮ್ಮ ಮಗಳ ಮಗಳು ಸುರೀಂದರ್ ಕೌರು ಇರುವಾಗ ಈ ಹುಡುಗನನ್ನು ಈ ಮದರಾಸಿ ಹುಡುಗಿ ಮರುಳು ಮಾಡಿಬಿಟ್ಟಳಲ್ಲಾ ಎಂಬ ಒಂದು ಕೀಟ ಅವರ ಒಳ ಮನಸ್ಸನ್ನು ಕೊರೆಯುತ್ತಲೇ ಇತ್ತು....

ಅಂದು ಭಾನುವಾರ. ಮಧ್ಯಾಹ್ನ ಎಲ್ಲರೂ ಒಟ್ಟಿಗೆ ಊಟಕ್ಕೆ ಕುಳಿತಿದ್ದರು. ಜಸವಂತ ಸಿಂಗನ ತಾಯಿ ಎಲ್ಲರಿಗೂ ಬಡಿಸುತ್ತಿದ್ದರು. ಅತ್ತೆಯ ಕೈ ರುಚಿಯ 'ಮಟರ್-ಪನೀರ್' ಸವಿಯುತ್ತಾ ಜಲಜಾಕ್ಷಿ "ಎಷ್ಟು ಸ್ವಾದಿಷ್ಟ ಇದು" ಎಂದು ತನ್ನ ಪಂಜಾಬಿ ಭಾಷೆಯ ಪಾರಂಗತ್ಯವನ್ನು ತೋರಿಸಿಯೇ ಬಿಟ್ಟಳು.

ಅದೆಂತಹ ಗಳಿಗೆಯೋ ಏನೋ ನೋಡಿ. "ಬುವಾಜಿ" (ಜಸವಂತನ ಸೋದರತ್ತೆ) ತಮ್ಮ ಸೋದರಳಿಯನ ಕಡೆಗೆ ನೋಡುತ್ತಾ "ನಿನ್ನ ಹೆಂಡತಿ ಇದೆಲ್ಲಾ ಮಾಡುತ್ತಾಳೆ ತಾನೆ? ನೀನ್ಯಾಕೋ ಸಣ್ಣಗಾದ ಹಾಗೆ ಕಾಣುತ್ತೀಯಾ. ಅದಕ್ಕೇ ಕೇಳಿದೆ" ಎಂದು ಒಂದು ಬಾಣವನ್ನು ಬಿಟ್ಟೇಬಿಟ್ಟರು.

ಪಾಪ ನಮ್ಮ ಜಲಜಾಕ್ಷಿಗೆ ಏನೂ ತಿಳಿಯದು. ಹುಡುಗುತನ ಇನ್ನು ಹೋಗಿರಲಿಲ್ಲ. "ಬುವಾಜಿ, ನಿಮ್ಮ ಸೋದರಳಿಯನೇ ಅಡಿಗೆ ಮಾಡುತ್ತಾರೆ. ನನಗೆ ಅಡಿಗೆಯೆಂದರೆ ಇಷ್ಟವೇ ಇಲ್ಲ" ಎಂದುಬಿಟ್ಟಳು.



ಒಂದು ನಿಮಿಷ ಪ್ರಳಯದ ಮೊದಲ ಶಾಂತತೆ ಆವರಿಸಿತು. ಬುವಾಜಿ ರೊಟ್ಟಿಯ ಚೂರನ್ನು ಮುರಿಯುತ್ತಿದ್ದವರು ಅಲ್ಲೇ ಅದನ್ನು ಬಿಟ್ಟು "ಯೇ ಕೀ ಹಾಲ್ ಹೈ ಪುತ್ತರ್" ಎಂದು ಪೀಠಿಕೆ ಹಾಕುತ್ತಾ ತಾವು ಮದುವೆಯಾಗಿ ಹೋದಾಗ ಐವತ್ತು ಜನರಿಗೆ ಅಡಿಗೆ ಮಾಡುತ್ತಿದುದರಿಂದ ಹಿಡಿದು ತಮ್ಮ ಮೊಮ್ಮಗಳು ಸುರೀಂದರ್ ಕೌರ್ ಎಷ್ಟೇ ಕಾಲೇಜು ಕಲಿತಿದ್ದರೂ ಇಪ್ಪತ್ತೈದು ಜನರಿಗೆ ಸಲೀಸಾಗಿ ಅಡಿಗೆ ಮಾಡಿ ಬಡಿಸುವುದರ ತನಕ ನಿರರ್ಗಳವಾಗಿ ವಾಕ್‌ಪ್ರವಾಹ ಹರಿಸುತ್ತಲೇ ಹೋದರು. ಜಸವಂತ ಸಿಂಗನು ಸುಮ್ಮನೇ ತಲೆ ಬಗ್ಗಿಸಿಕೊಂಡು ಸೋದರತ್ತೆಯ ವಾಕ್ ಪ್ರವಾಹದಲ್ಲಿ ತತ್ತರಿಸುತ್ತಿದ್ದವನು ಒಮ್ಮೆಗೇ ಹೆಂಡತಿಯತ್ತ ದುರು ದುರು ನೋಡಿದ. ಕೆಂಡದಂತಹ ಕಣ್ಣುಗಳಲ್ಲಿ ಕೋಪದ ಬೆಂಕಿ

ನಾಲಿಗೆಗಳನ್ನು ಚಾಚುತ್ತಿದ್ದವು. ಅಷ್ಟೇ ಅಲ್ಲ ನಿಧಾನವಾಗಿ ಎದ್ದವನೇ ಬೆಲ್ಟಿನತ್ತ ಕೈ ಹಾಕುತ್ತಾ "ಏನು ನಾಚಿಕೆ ಗೇಡು! ಹೆಂಗಸಾಗಿ ಅಡಿಗೆ ಮಾಡುವುದಿಲ್ಲವಂತೆ. ಇನ್ನು ಮುಂದಾದರೂ ಕಲಿಯುವೆ ತಾನೆ?" ಎಂದು ಎಲ್ಲರ ಎದುರಿಗೂ ಗದರಿಸಿಬಿಟ್ಟ.

ಗಂಡನ ಈ ರೂಪವನ್ನು ನೋಡಿ ಜಲಜಾಕ್ಷಿ ಹೌಹಾರಿಬಿಟ್ಟಳು. ಮೊದಲೇ ಸರದಾರರ ಕೋಪ. ಅದರಲ್ಲೂ ಊಟದಂತಹ ಕಾರಣ. ಕಣ್ಣೀರಿನ ಹೊಳೆ ಹರಿಸುತ್ತಲೇ "ಹಾಂಜಿ" ಎಂದುಬಿಟ್ಟಳು. ಜಸವಂತನ ತಾಯಿ ಸೊಸೆಯ ಕಣ್ಣೀರು ನೋಡಿ "ರೋ ಮತ್ ಬೇಟಿ. ಮೈ ಸಿಖಾವೂಂಗಿ" ಎಂದು ಸೊಸೆಗೆ ಸಮಾಧಾನ ಮಾಡಿದರು.

ರಜ ಮುಗಿದು ದೆಹಲಿಗೆ ಮರಳುವ ಹೊತ್ತಿಗೆ ಜಲಜಾಕ್ಷಿ ಪಂಜಾಬಿ ಊಟ ತಯಾರಿಸುವುದರಲ್ಲಿ ನಿಷ್ಣಾತಳಾದಳು. ಬುವಾಜಿ ಹಳ್ಳಿಗೆ ಹೋಗುವ ದಿನ ಜಲಜಾಕ್ಷಿಯೇ ಪೂರ್ತಿ ಅಡಿಗೆ ಮಾಡಿ ಬಡಿಸಿದಳು. ಗಂಡ ಪ್ರೀತಿಯ ನೋಟದಿಂದ ಹೆಂಡತಿಯತ್ತ ನೋಡಿ "ದೇಖಾ ಬುವಾಜಿ" ಎಂದು ಸೋದರತ್ತೆಗೆ ಹೇಳಿದ. ಜಸವಂತನ ತಂದೆ ತಾಯಿಗಳಿಬ್ಬರೂ ಹೆಮ್ಮೆಯಿಂದ ಬೀಗಿದರು!

ದೆಹಲಿಗೆ ಬಂದವಳೇ ಸುಧಾರಿಸಿಕೊಳ್ಳೋಣ ಎಂದು ಜಲಜಾಕ್ಷಿ ನಿರ್ಧರಿಸಿದಳು. ಆದರೆ ಗಂಡ ಬಿಡಬೇಕಲ್ಲ. "ನಿಮ್ಮ ಅಮ್ಮನ ಹತ್ತಿರ ಹುಳಿಯನ್ನ, ಒಬ್ಬಟ್ಟನ್ನು ಮಾಡುವುದನ್ನು ಕಲಿತು ಬಾ" ಎಂದುಬಿಟ್ಟ. ನಳಿನಾಕ್ಷಿಯ ಹತ್ತಿರ ಎಲ್ಲವನ್ನೂ ಹೇಳಿಕೊಂಡು ಅತ್ತಳು ಮಗಳು. "ಪಾಪ ಬಿಡೆ.. ಎಷ್ಟು ದಿನ ಗಂಡ ಅಡಿಗೆ ಮಾಡುತ್ತಾನೆ? ಅವನು ಇಷ್ಟು ಮಾಡಿದ್ದೇ ಹೆಚ್ಚು. ನಾಳೆಯಿಂದ ಎಲ್ಲಾ ಹೇಳಿಕೊಡುತ್ತೇನೆ. ಈ ವರ್ಷದ ಯುಗಾದಿಯ ದಿನ ಹುಳಿಯನ್ನ ಒಬ್ಬಟ್ಟನ್ನೇ ಮಾಡಿಬಿಡು. ಪತಿಯನ್ನೊಲಿಸಿಕೊಳ್ಳುವ ಕಲೆ ಪಾಕಶಾಸ್ತ್ರ ಕಣೆ" ಎಂದು ಮಗಳಿಗೆ ಕಿವಿಮಾತನ್ನೂ ಹೇಳಿದಳು.

ಈ ಯುಗಾದಿಗೆ ಜಸವಂತ ಸಿಂಗನು ಅತ್ತೆ, ಮಾವನವರು ಮತ್ತು ಭಾವಮೈದುನನ್ನು ತನ್ನ ಮನೆಗೆ ಊಟಕ್ಕೆ ಕರೆದಿದ್ದಾನಂತೆ, ಹೆಂಡತಿಯ ಪಾಕಶಾಸ್ತ್ರ ಪ್ರದರ್ಶಿಸಲು.

---

ಬಜಾರಿ
ಕನ್ಯಾಕುಮಾರಿ
ಯ ಕೈಹಿಡಿದ ರಾಮಶೇಷ
ಸದಾ ಕರಿ ವದನ
ಕುರಿ ವದನ
ಬದುಕಿದ್ದೂ 'ಕೀರ್ತಿಶೇಷ'

**ಶಂಸ**

# ಹೊಸ ವರುಷ– ಹೊಸ ಹರುಷ

ಸೀ.ಆರ್. ಸತ್ಯ

ಕರ್ನಾಟಕದ ಪ್ರಿಯ ವಿದ್ಯಾರ್ಥಿ, ವಿದ್ಯಾರ್ಥಿನಿಯರೇ :

ಕಳೆದ ವರುಷ ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಸೀಟುಗಳ ಬಗ್ಗೆ ನೀವು ಪಟ್ಟ ಪರದಾಟ ಹಾಗೂ ನಿಮ್ಮ ಅಪ್ಪ ಅಮ್ಮಂದಿರು ಅನುಭವಿಸಿದ ಯಾತನೆಗಳನ್ನು ನೋಡಿ, ಸಹಿಸಲಾಗದೆ, ಕರ್ನಾಟಕ ಸರ್ಕಾರ ತೀವ್ರ ಅನುಕಂಪ ಸೂಚಿಸಿ, ಈ ವರುಷ ಒಂದು ನವೀನ ರೀತಿಯಲ್ಲಿ ಈ ಕಾರ್ಯವನ್ನ ಕೈಗೊಳ್ಳಲಿದೆ. ಅದರ ಪ್ರಕಾರ ಯಾರಿಗೆ ಬೇಕಾದರೂ ಇಂಜಿನಿಯರಿಂಗ್ ಅಥವಾ ಮೆಡಿಕಲ್ ಸೀಟುಗಳನ್ನ ಕೊಡಲಾಗುತ್ತೆ. ಆದರೆ ಈಗಿರುವ ಇಂಜಿನಿಯರಿಂಗ್ ಕಾಲೇಜುಗಳನ್ನೆಲ್ಲಾ ಮುಚ್ಚಿ ಬೆಂಗಳೂರಿನ ಚಿನ್ನಸ್ವಾಮಿ ಸ್ಟೇಡಿಯಂನಲ್ಲಿ ಪಾಠ ಪ್ರವಚನೆಗಳನ್ನೆಲ್ಲಾ ಕೇಂದ್ರೀಕರಿಸಲಾಗುತ್ತೆ (ಕ್ಯಪಾಸಿಟಿ: ಒಂದು ಲಕ್ಷ ಸೀಟುಗಳು, ಸ್ಟಾಂಡಿಂಗೂ ಸೇರಿ). ಅದೇ ರೀತಿ ಎಲ್ಲಾ ಮೆಡಿಕಲ್ ಕಾಲೇಜುಗಳನ್ನು ಮುಚ್ಚಿ ಮೈಸೂರಿನ ಕುಕ್ಕನ ಹಳ್ಳಿ ಕೆರೆಯ ಮೈದಾನದಲ್ಲಿ ಪಾಠ ಪ್ರವಚನ ನಡೆಸಿ ಮೈಸೂರು ಅರಮನೆಯನ್ನು ಆಸ್ಪತ್ರೆಯಾಗಿ ಮಾರ್ಪಡಿಸಲಾಗುತ್ತೆ (ಕ್ಯಪಾಸಿಟಿ: ಅರ್ಧ ಲಕ್ಷ). ಸೀಟು ಬೇಕಾದವರು ಹೊರಗೆ ತೆಗೆಯಲಾಗುವ ಸ್ಪೆಶಲ್ ಕೌಂಟರ್ರುಗಳಲ್ಲಿ ನಗದು ಹಣ ಪಾವತಿ ಮಾಡಿ ಯಾವ ಅಭ್ಯಂತರವೂ ಭಯವೂ ಇಲ್ಲದೇ ಒಳಗೆ ಹೋಗತಕ್ಕದ್ದು. ಈ ವರುಷ ವಿದ್ಯಾ ಸರಸ್ವತಿಯ ಹಾಗೂ ಮಹಾಲಕ್ಷ್ಮಿಯ ಆಶೀರ್ವಾದಗಳು ನಿಮ್ಮನ್ನು ಕಾಪಾಡಲಿ.

**ಮಾನ್ಯ ಕಾಫೀ ಪ್ರಿಯರೇ :**

ಕಾಫೀ ಬೀಜದ ಬೆಲೆ 1993ರಲ್ಲಿ ಗಗನಕ್ಕೇರಿದ್ದು ನಿಮ್ಮೆಲ್ಲರನ್ನೂ ಕಂಗಾಲಾಗಿ ಮಾಡಿದೆ. ಧೈರ್ಯ ತಂದುಕೊಳ್ಳಿ. ಈ ಹೊಸ ವರುಷದಲ್ಲಿ ನಮ್ಮ ಭಾರತೀಯ ವಿಜ್ಞಾನಿಗಳ ತಂಡವೊಂದು ಬಹಳ ಮಹತ್ವಪೂರಕ ಸಂಶೋಧನೆಯನ್ನು ನಡೆಸಲಿದೆ. ಅದರ ಕಾರ್ಯ ಫಲಿಸಿದರೆ, ನೀವೆಲ್ಲರೂ ಮೊದಲಿನ ಹಾಗೆ ಕಾಫಿ ಸವೆಯುವುದರಲ್ಲಿ ಸಂಶಯವೇ ಇಲ್ಲ. ಸಂಶೋಧನೆ ಯಾತರ ಬಗ್ಗೆ ಅಂತ ಕೇಳಿದಿರಾ? ಸಾರಾಂಶವಾಗಿ ಹೇಳಬೇಕಾದರೆ ಇಷ್ಟೆ: ಕಾಫಿಗೆ ಚಿಕೋರಿ ಹಾಕೋ ಬದಲು ಚಿಕೋರಿಗೆ ಕಾಫಿ ಹಾಕಲು ಸಾಧ್ಯವೆ? ಹಾಗೂ ಬೆಳ್ಳಗಿರುವುದೆಲ್ಲಾ ಹಾಲೇ ಆಗಿರಬೇಕೆ? ಹಾಲಿನ ಬದಲು ಇನ್ನೇನಾದರೂ (ಕಾಫಿಯಲ್ಲಿ!) ಉಪಯೋಗಿಸಬಹುದೆ?

**ಪ್ರಿಯ ಕ್ಷೀರ ಪ್ರಿಯರೇ :**

ಕಾಫೀ ವಿಷಯ ಎತ್ತಿದಾಗ ನಿಮ್ಮನ್ನು ಮರೆಯಲು ಸಾಧ್ಯವೇ? 1993ರಲ್ಲಿ ಬೆಂಗಳೂರು ಡೈರಿಯವರು ಕೊಬ್ಬಿನ ಅಂಶ ಹೆಚ್ಚಿಸಿ, ಇನ್ನೂ ಪುಷ್ಟಿಕರವಾದ ಹಾಲನ್ನು ಉತ್ಪಾದಿಸಿ ನಿಮಗೆಲ್ಲರಿಗೂ ಹಂಚಿದ್ದಾರೆ. ಇದರಿಂದಾಗಿ ನೀವೆಲ್ಲರೂ ಆರೋಗ್ಯವಂತರಾಗಿ, ಬಲಿಷ್ಠರಾಗಿ, ಗಟ್ಟಿಮುಟ್ಟಾಗಿ, ಸಂತೋಷದಿಂದ 1994ನೇ ಇಸವಿಗೆ ಕಾಲಿಟ್ಟಿದ್ದೀರಿ. ಹಾಗಿದ್ದೂ, 1994 ರಲ್ಲಿ ಬೆಂಗಳೂರು ಡೈರಿಯವರು ಇನ್ನೂ ಪುಷ್ಟಿಕರವಾದ – ಅಂದರೆ, ಬಾದಾಮಿ ಹಾಲು, ಹಾಲುಕೋವ, ದೂದ್‌ಪೇಡಾ, ಪಂಚಾಮೃತ – ಇತ್ಯಾದಿ ಆಹಾರ ವಸ್ತುಗಳನ್ನು ತಯಾರಿಸಿ ಹಾಲಿನ ಬೂತುಗಳಲ್ಲಿ ಮಾತ್ರವಲ್ಲದೇ ಎಲ್ಲಾ ಸ್ಕೂಲು, ಕಾಲೇಜು, ಸರ್ಕಾರಿ ಆಫೀಸುಗಳಲ್ಲಿ ರಿಯಾಯಿತಿ ದರದಲ್ಲಿ ಮಾರಿ, ಹಂಚಿ, ಪುಣ್ಯಕಟ್ಟಿಕೊಳ್ಳಲಿ ಎಂದು ಹಾರೈಸುತ್ತೇನೆ. ಇಂದು ಭಾರತದ ಹಾಗೂ ಭಾರತೀಯರ ಶಕ್ತಿ – ಹಾಲು ಕುಡಿಯುವ ಪ್ರಜೆಗಳಲ್ಲಿ ಅಡಗಿದೆ. ಬೀರು ಕುಡಿಯುವವರಲ್ಲಲ್ಲ!

**ಸಹೃದಯದ ಭಾರತೀಯ ಭೂವಿಜ್ಞಾನಿಗಳೇ:**

ಏಳಿ, ಎದ್ದೇಳಿ ! ಹೊರಗೆ ಬನ್ನಿ!! ಲಾಟೂರ್‌ನಲ್ಲಿ ಭೂಕಂಪನವಾದಾಗಿನಿಂದ ವಾದ ವಿವಾದಗಳಲ್ಲಿ ಸೊರಗಿಹೋಗಿರುವ ನೀವೆಲ್ಲರೂ ಇನ್ನೆಷ್ಟು ದಿನ ಭೂಮಿಯೊಳಗೆ ಅಡಗಿಕೊಂಡಿರುತ್ತೀರಿ? ಹೊಸ ವರುಷದ ಚಳಿ ಮಾಗಿ, ಬಿಸಿಲು ಹತ್ತುತ್ತಿದೆ. ದೀರ್ಘ ಉಸಿರೆಳೆದು ಬಿಸಿಲು ಕಾಯಿಸಿಕೊಳ್ಳಿ. ಇನ್ನೊಮ್ಮೆ ಭಾರತದಲ್ಲಿ ಭೂಕಂಪನವೇನಾದರೂ ಆದರೆ (ಶಾಂತಂ ಪಾಪಂ!) ಆ ತಪ್ಪು ಖಂಡಿತಾ ನಿಮ್ಮದಲ್ಲ, ಬೀಜೇಪೀಯವರದೋ ಇಲ್ಲಾ ಪಿ.ವಿ. ನರಸಿಂಹರಾಯರದೋ ಅಂತ ಹೇಳಿ ನುಸುಳಿಕೊಳ್ಳಿ!

**ಕರ್ನಾಟಕದಲ್ಲಿ ದ್ವಿಚಕ್ರವಾಹನ ಓಡಿಸುವ ಬಂಧು ಭಗಿನಿಯರೇ:**

ಕಳೆದ ವರುಷ ನಮ್ಮ ಘನ ಸರ್ಕಾರ ನಿಮ್ಮೆಲ್ಲರ ತಲೆಗಳ ಮೇಲೆ ಕಡ್ಡಾಯವಾಗಿ ಹೆಲ್ಮೆಟ್‌ಗಳನ್ನು ತೊಡಿಸಿ, ತೆಗೆಸಿ, ತೊಡಿಸಿ, ತೆಗೆಸಿ ಹಾಗೂ ಹೀಗೂ ಅಂತಾ ನಿಶ್ಚಯ ಮಾಡದೆ ನಿಮ್ಮೆಲ್ಲರನ್ನೂ ಗೋಳಾಡಿಸಿದೆ. ನಿಮ್ಮ ತಲೆಗಳ ಯೋಗಕ್ಷೇಮದ ಬಗ್ಗೆ ಈ ಸರ್ಕಾರ ಅದರ ತಲೆಯನ್ನೇಕೆ ಹಾಕಬೇಕಿತ್ತು? ಸರ್ಕಾರದ ಈ ತೊಯ್ದಾಟಕ್ಕೆ ಕಾರಣವಿಷ್ಟೆ: ನಿಮ್ಮಗಳ ತಲೆಗಳು ಈ ಕರ್ನಾಟಕ ರಾಜ್ಯಕ್ಕೆ ಉಪಯೋಗವೋ ಇಲ್ಲವೋ ಅನ್ನುವ ಪ್ರಶ್ನೆಗೆ ಸರ್ಕಾರಕ್ಕೆ ಇನ್ನೂ ಸರಿಯಾದ ಉತ್ತರ ಸಿಕ್ಕಿಲ್ಲ. ಈ ಹೊಸ ವರುಷದಲ್ಲಿ ನೀವೆಲ್ಲರೂ ಒಕ್ಕೊರಲಿನಿಂದ, ಒಗ್ಗಟ್ಟಿನಿಂದ ನಿಮ್ಮ ತಲೆಗಳಿಂದ ಈ ರಾಜ್ಯಕ್ಕೆ ಯಾವ ಉಪಯೋಗವೂ ಇಲ್ಲ. ಯಾವ ಸಂಬಂಧವೂ ಇಲ್ಲ ಅಂತ ಸಮರ್ಥಿಸಿ,

ನಿಮ್ಮೆಲ್ಲರ ತಲೆಗಳನ್ನು ಈ ಸರ್ಕಾರದ ಬಂಧನದಿಂದ ನಿಮಗಿಷ್ಟ ಬಂದಂತೆ, ನಿಮಗೆ ತೋರಿದ ವೇಗದಲ್ಲಿ, ತಲೆ ಬೋಳಿಸಿಕೊಂಡಾಗಿಯೂ ಸರಿ, ಸುಖವಾಗಿ ಓಡಾಡಿ ಎಂದು ಹರಿಸುತ್ತೇನೆ.

**ಮಾನ್ಯ ವೈದ್ಯ ಬಂಧುಗಳೇ:**

ಕಳೆದ ವರುಷ ವೈದ್ಯಕೀಯ ವೃತ್ತಿಯೂ ಕನ್‌ಸ್ಯೂಮರ್ ಫೋರಮ್‌ನ ಆವೃತ್ತಿಯಲ್ಲಿ ಬರುತ್ತದೆಂಬ ಸುದ್ದಿಯನ್ನು ಕೇಳಿ ನೀವೆಲ್ಲರೂ ಗಾಬರಿಯಾಗಿದ್ದಿರಿ (ವಕೀಲ ಬಾಂಧವರು ಸಂತೋಷ ಪಟ್ಟಿಕೊಂಡಿದ್ದು ಬೇರೇ ವಿಷಯ). ಹಾಗೇನಾದರೂ ಆಗಿದ್ದರೆ, ನಿಮ್ಮ ಪರಿವಾರದಲ್ಲಿ ಅಷ್ಟೆಷ್ಟು ಮಂದಿ ಸಂಪಾದನೆಯನೆಲ್ಲಾ ಕಳೆದುಕೊಂಡು ಜೈಲಿನಲ್ಲೋ ಅಥವಾ ಮನೆಯಲ್ಲೋ ತಪಸ್ಸು ಮಾಡಬೇಕಿತ್ತು. ಆದರೆ, ದೇವರು ದೊಡ್ಡವನು! ಆ ಗಂಡಾಂತರ ಬರಲಿಲ್ಲ! ಅದೇ ದೇವರು ಈ ಹೊಸ ವರುಷದಲ್ಲಿ ಯಾವನಾದರೂ ರೋಗಿ ಬುದ್ಧಿಕೆಟ್ಟು ನಿಮ್ಮನ್ನು ಕೋರ್ಟಿಗೆ ಎಳೆದರೆ, ನಿಮ್ಮ ಮೇಲಿನ ಆ ಕೇಸು ಅನೇಕ ಭಾಗಗಳಾಗಿ ತುಂಡಾಗಿ – ನಶಿಸಲಿ (ಅಂದರೆ, ನಿಮ್ಮ ತಪ್ಪನ್ನ ನರ್ಸಿಂಗ್ ಹೋಮಿನ ಮ್ಯಾನೇಜರ್ರು, ಆಯಾಗಳು, ಲಿಫ್ಟ್ ಹಾಗೂ ಕ್ಯಾಂಟೀನ್ ಬಾಯ್ಸ್, ವಾಚ್ ಮ್ಯಾನ್ ಹಾಗೂ ಕಾಂಪೌಂಡ್ ಹೊರಗಡೇ ಇರೋ ಎಳ್ನೀರು ಮಾರೋವರೆಲ್ಲಾ ಭಾಗ ಮಾಡಿಕೊಂಡು ನೀವು ಮಾತ್ರ ಮುಳುಗುವುದು ಬೇಡ) ಅಂತ ನನ್ನ ಹಾರ್ದಿಕ ಶುಭಾಷಯಗಳು.

**ಮಾನ್ಯ ಆಟೋರಿಕ್ಷಾ ಮಾಲೀಕರೇ:**

ನುಸುಳಿ ಹೋದ ವರುಷದಲ್ಲಿ ಸರ್ಕಾರ ನಿಮ್ಮ ಮೇಲೆ ಆದಾಯ ಸುಂಕ ಹೂಡಿ ನಿಮ್ಮನ್ನ ಪಾಪಿಗಳನ್ನಾಗಿ ಮಾಡಿದೆ. ಹೆದರಬೇಡಿ. ಈ ವರುಷ ನಿಮ್ಮ ಜೊತೆಗೆ ಇನ್ನೂ ಹೊಸಬರು ಬಂದು ಸೇರುತ್ತಾರಂತೆ. ದೆಹಲಿಯಿಂದ ಬಂದ ಸುದ್ದಿಯ ಪ್ರಕಾರ ಇವರುಗಳು: ಭೇಲ್‌ಪೂರಿ – ಕಡಲೇಕಾಯಿ – ತಾಟಿ ನಿಂಗೂ – ಹಳೇಪಾತ್ರೆ ಹಳೆ ಸಾಮಾನ್ – ಬೆಣ್ಣೆ ಮಾಡೋಕ್ಕೆ ಡಬ್ಬ ಕಟ್ಟಿರೋ ಸೈಕಲ್ – ಇವುಗಳ ವಾಹನಗಳ ಮಾಲೀಕರು. ಹ್ಯಾಪಿ ಕಂಪೆನಿ!

**ಪ್ರಿಯ ಅಪರಂಜಿ ಸಂಪಾದಕರೆ:**

ವಯಸ್ಸು ಹನ್ನೊಂದಾಗಿ "ಅಪರಂಜಿ" ಈಗ ದಾವಣಿ ಲಂಗದಿಂದ ಸೀರೆ ಉಡೋ ಹಂತಕ್ಕೆ ಇಳಿದಿದ್ದಾಳೆ. ನಿಮಗೆ ಹಾಗೂ ನಮಗೆಲ್ಲರಿಗೂ ಕೈಕೊಟ್ಟು ಎಲ್ಲಾದರೂ ನುಣುಚಿಕೊಂಡು ಓಡಿಹೋಗಿ ತಲೆ ಮರೆಸಿ ಕೊಂಡಾಳು ಜೋಕೆ! ಹೊಸ ವರುಷದಲ್ಲಿ ದೇವರು ಅವಳನ್ನು ಚೆನ್ನಾಗಿ ಕಾಪಾಡಲಿ.

ಅಪರಂಜಿಯ ಚಂದಾದಾರರೆಲ್ಲರೂ ನಿಮಗೆ ಕೊಡಬೇಕಾದ ಬಾಕಿಗಳನ್ನ ಕೊಟ್ಟು ಈ ವರುಷ ಅವಳ ಆರ್ಥಿಕ ಸ್ಥಿತಿಯನ್ನು ಉತ್ತಮವಾಗಿಡಲಿ ಅಂತ ನಮ್ಮೆಲ್ಲರ ಆಸೆ ......

# ನೀನಾರಿಗಾದೆಯೋ ಎಲೆ ಮಾನವ?

ಪೀಪಿ

"ಕಣ್ಣ ಮುಚ್ಚಾಲೆ" ಸಂಜೆ ಪತ್ರಿಕೆಯ ವರದಿಗಾರನಾಗಿ ನನಗೆ ಅಷ್ಟೇನೂ ವರ್ಚಸ್ಸು ಇರಲಿಲ್ಲ. ಆದರೂ ನನಗೊಂದು ಪತ್ರಕರ್ತನ ಪರ್ಸನಾಲಿಟಿ ಇದೆಯೆಂದು ಬಲವಾಗಿ ನಂಬಿಕೊಂಡು ನಾನು ಹುಟ್ಟಿರುವುದೇ ಪತ್ರಕರ್ತನಾಗಿ ಜನಸೇವೆ ಮಾಡಿ ಸಮಾಜ ಋಣ ತೀರಿಸುವುದಕ್ಕೆಂದು ಆತ್ಮ ವಿಶ್ವಾಸದಿಂದ ಪ್ರತಿಪಾದಿಸುತ್ತಿದ್ದೆ. ಈ ಕೆಲಸವನ್ನು ನಾನೇ ಮಾಡದಿದ್ದರೆ ಬೇರೆ ಯಾರು ತಾನೆ ಮಾಡುತ್ತಾರೆ? ಇಂಥದಕ್ಕೆಲ್ಲಾ ಈಗಿನ ಕಾಲದಲ್ಲಿ ಬೇರೆಯವರನ್ನು ನಂಬುವಂತಿಲ್ಲ. ಪ್ರಚಾರ ಮಾಧ್ಯಮದಲ್ಲಿದ್ದೂ ನನಗೆ ಬೈಲೈನ್ ದೊರಕಿಸಿಕೊಡುವಂಥ ಯಾವುದೇ ವರದಿ ಇದುವರೆಗೂ ನನ್ನಿಂದ ಮಾಡಲಾಗದಿರುವುದಕ್ಕೆ ಸಂಪಾದಕ/ಸಹೋದ್ಯೋಗಿಗಳ ಹೊಟ್ಟೆಕಿಚ್ಚೇ ಕಾರಣವೆಂದು ರಾಜಾರೋಷವಾಗಿ ಎದೆತಟ್ಟಿಕೊಂಡು ಹೇಳಲು ನಾನು ಹಿಂಜರಿಯುತ್ತಿರಲಿಲ್ಲ. ಇರಲಿ, ಮೊನ್ನೆ ಸಂಪಾದಕ ನನ್ನನ್ನು ಕರೆದು ಒಂದು ಏಜೆನ್ಸಿ ಕಾಪಿಯನ್ನು ಕೈಲಿಟ್ಟು ಹೇಳಿದ್ದೇನೆಂದರೆ "ನೋಡ್ರೀ, ಸರಿಯಾಗಿ ಓದಿಕೊಳ್ಳಿ. ಇದರ ಮೇಲೆ ಹನ್ನೆರಡು ಗಂಟೆಯ ಒಳಗೆ ಬಂದು ಜನಾಭಿಪ್ರಾಯ ಸಂಗ್ರಹ ಬೇಕು. ಓಡಿ ಇಲ್ಲಿಂದ".

ಕೈಲಿದ್ದ ಕಾಗದದ ತುಣುಕನ್ನು ಓದುತ್ತಲೇ ಓಡಿದೆ ಎನ್ನುವುದಕ್ಕಿಂತ ಓಡುತ್ತಲೇ ಓದಿದೆ ಎನ್ನುವುದು ಸೂಕ್ತ. ನನಗೆ ಇದೊಂದು ಮಹತ್ವದ ಅಸೈನ್‌ಮೆಂಟ್, ಬೈಲೈನ್ ಗ್ಯಾರಂಟಿ. ಸಂಪಾದಕನೇನಾದರೂ ನನ್ನ ಹೆಸರು ಹಾಕದಿದ್ದರೆ, ನಾಳೆಯೆ ರಿಸೈನ್ ಮಾಡಿಬಿಡುತ್ತೇನೆ ಎಂದು ಶಪಥ ಮಾಡಿದೆ. ಅಂತೂ ಮಹತ್ವಾಕಾಂಕ್ಷೆಯನ್ನು ಸಾಧಿಸುವ ಮಹಾದ್ವಾರ ನನಗಾಗಿ ಉತ್ತರಾಯಣ ಪುಣ್ಯಕಾಲದ ಸ್ವರ್ಗದ ಬಾಗಿಲಿನಂತೆ ತೆಗೆದುಕೊಂಡಿದೆಯೋ ಎಂಬಷ್ಟು ಸಂಭ್ರಮವಾಯಿತು. ನಮ್ಮ ಸರಕಾರ ಈಗ ಹಾಲೆಂಡ್‌ನಿಂದ ಸಗಣಿಯನ್ನು ಆಮದುಮಾಡಿಕೊಳ್ಳಲು ನಿರ್ಧರಿಸಿದೆ! ನಾನೇ ಸಂಪಾದಕನಾಗಿದ್ದರೆ,ಪ್ರಥಮ ಪುಟದ ಸಂಪಾದಕೀಯ, 'ನಾಚಿಕೆಗೇಡು' ಎಂದೋ 'ಸ್ವಾಗತಾರ್ಹ, ಅಭಿನಂದನೀಯ' ಎಂದೋ ಬರೆದು ಬಿಡುತ್ತಿದ್ದೆ. ಏನೇ ಬರೆದರೂ ನನ್ನ ಹೆಸರು ಬಂದೇ ಬರುತ್ತಿತ್ತು. ಈಗ ಅಭಿಪ್ರಾಯ ಸಂಗ್ರಹಣೆಯನ್ನೂ ಅಷ್ಟೇ ಉತ್ಸಾಹದಿಂದ ಮಾಡಲು ಸನ್ನದ್ಧನಾದೆ.

ಯಾರ ಯಾರನ್ನು ಸಂದರ್ಶಿಸಬೇಕೆಂದು ಲೆಕ್ಕಾಚಾರ ಶುರುವಾಯಿತು. cross - section of the people. ಬುದ್ಧಿ ಜೀವಿಗಳು, ರಾಜಕಾರಣಿ, ಗೃಹಿಣಿ, ಯುವತಿ, ಯುವಕ, ಗುಮಾಸ್ತ, ರೈತ, ನಾಟಕಕಾರ, ಪೋಸ್ಟ್‌ಮನ್, ಕಿರಾಣಿ ವ್ಯಾಪಾರಿ, ಶೇರು ಪೇಟೆ ದಲ್ಲಾಳಿ, ಬ್ಯುರೋಕ್ರ್ಯಾಟ್, ಟೆಕ್ನೋಕ್ರಾಟ್, ವಿಜ್ಞಾನಿ, ಕಲಾವಿದ (ದೆ), ಬೆರಣಿ ವ್ಯಾಪಾರಿ, ಕವಿ, ಸಂಪ್ರದಾಯಸ್ಥ, ನಿರುದ್ಯೋಗಿ – ಹೀಗೆ

ಹಲವಾರು ಪ್ರತಿನಿಧಿಗಳು ಮನಸ್ಸಿನಲ್ಲಿ ಸುಳಿದು ಹೋದರು. "ವಿದೇಶೀ ಸಗಣಿ ಆಮದು – ಮಿಶ್ರಪ್ರತಿಕ್ರಿಯೆ" ಎಂಬ ತಲೆ ಬರಹವೂ ತಲೆಯಲ್ಲಿ ಹೊಳೆಯಿತು. ಹೀಗೆ ಬುದ್ಧಿ ಜೀವಿಯಾಗಿ ನನ್ನ ಕರ್ತವ್ಯ ಮತ್ತು ಹೊಣೆಗಾರಿಕೆ ಹೆಚ್ಚುತ್ತಿರುವುದು ನನಗೆ ಸಂತಸದ ಸಂಗತಿಯಾಗಿತ್ತು. ನನ್ನಂತಹ ಬುದ್ಧಿ ಜೀವಿಯಿಂದಲೇ ಅಭಿಪ್ರಾಯ ಸಂಗ್ರಹಣೆಯ ಓಂನಾಮವಾದರೆ ಶುಭ ಶಕುನವೆಂದು ಪ್ರೇರಣೆಯಾಯಿತು. ಹತ್ತಿರದಲ್ಲೇ ಇದ್ದ ಕಾಫಿ ಹೌಸ್‌ಗೆ ಹೋದೆ. ಸುಯೋಗದಿಂದ ರಾಜಣ್ಣ ಸಿಕ್ಕಿದ. ಅವನೀಗ ಪರಿಸರ ಮಾಲಿನ್ಯ ನಿರ್ಮೂಲನಾ ಪಡೆಯ ದಣಾಯಕ. ಈ ಪಟ್ಟ ದಕ್ಕಿದಾಗ ನಮಗೆಲ್ಲಾ ಸಖತ್ ಗುಂಡು ಪಾರ್ಟಿ ಕೊಟ್ಟಿದ್ದ. ಕಲುಷಿತ ನಗರ ಪರಿಸರದಲ್ಲಿ ಅವನ ಪಡೆಯವರು ತೀವ್ರ ಆಂದೋಲನ ನಡೆಸಿ ಜನಜಾಗೃತಿ ವ್ರತವನ್ನು ಕೈಗೊಂಡಿದ್ದರು. ಅವನ ಭಾವ ಚಿತ್ರವಿರುವ ಪೋಸ್ಟರುಗಳು ಅವನ ಕಳಕಳಿಯ ಮನವಿಯನ್ನು ಹೊತ್ತು ನಗರದ ಎಲ್ಲಾ ಸಾರ್ವಜನಿಕ ಕಟ್ಟಡಗಳ, ಕಾಂಪೌಂಡ್‌ಗಳ ಮೇಲೆ ರಾರಾಜಿಸುತ್ತಿತ್ತು. ಸಮಾಜದ ವಿವಿಐಪಿಯಾಗಿ ರೂಪುಗೊಳ್ಳುತ್ತಿರುವ ಅವನ ತಲೆಯೊಳಗೆ ಈ ಸಗಣಿ ವಿಚಾರವನ್ನು ಹಾಕುವುದು ನನಗೆ ವೈಯಕ್ತಿಕವಾಗಿ ಸಂತಸದಾಯಕವೆನಿಸಿತು.

**ನಾನು:** ರಾಜಣ್ಣನವರೇ, ನಮ್ಮ ಸರಕಾರ ವಿದೇಶೀ ಸಗಣಿಯನ್ನು ಆಮದು ಮಾಡಿಕೊಳ್ಳೋ ವಿಚಾರದಲ್ಲಿ ನಿಮ್ಮ ಪ್ರತಿಕ್ರಿಯೆ ಏನು?

**ರಾಜಣ್ಣ:** ನಮ್ಮ ವಾಣಿಜ್ಯದ ಜಾಗತೀಕರಣದಲ್ಲಿ ಇದೊಂದು ದಿಟ್ಟ ಹೆಜ್ಜೆ ಅನ್ನೋದು ನಿಜವಾದರೂ ಇದರ ವಿಶ್ಲೇಷಣೆ ಆಗಬೇಕು. ಈ ವಿಷಯದಲ್ಲಿ ಸಾರ್ವಜನಿಕ ಚರ್ಚೆ ಆಗಿ ರಾಷ್ಟ್ರೀಯ ಅಭಿಪ್ರಾಯ ಏನೂಂತ ಜನಕ್ಕೆ ತಿಳೀಬೇಕು. ಸಡಿಲೀಕೃತ ಆರ್ಥಿಕ ನೀತಿಯ ದುರುಪಯೋಗವನ್ನು ನಮ್ಮ ದೇಶದವರಾಗಲೀ ವಿದೇಶೀಯರಾಗಲೀ ಮಾಡಿಕೊಳ್ಳದ ಹಾಗೆ ಎಚ್ಚರಿಕೆ – ರಾಷ್ಟ್ರೀಯ ಜಾಗೃತಿ – ಇರಬೇಕು. ಪರಿಸರದ ಮಾಲಿನ್ಯದ ಮೇಲೆ ಇದರ ಪರಿಣಾಮ ಏನೂಂತ ತಕ್ಷಣ ಹೇಳೋದಕ್ಕಾಗೋದಿಲ್ಲ. ಅದಕ್ಕೂ ಮೊದಲು ಉರುಗ್ವೆ ರೌಂಡ್ ಮಾತುಕತೆಯಲ್ಲಿ ಯಾವ ಯಾವ ಪದಾರ್ಥಗಳು ಸೇರಿವೆ ಅನ್ನೋದರ ಪರಿಶೀಲನೆ ವಿವರವಾಗಿ ಆಗಬೇಕು. ಅದೆಲ್ಲಾ ಆಗದೆ ಧಿಡೀರ್ ಅಂತ ಸಗಣಿ ವ್ಯಾಪಾರದ ವಿಷಯದಲ್ಲಿ ಇದಮಿತ್ಥಂ ಅಂತ ಹೇಳಿಬಿಡೋದು ಅವಿವೇಕದ ಪರಮಾವಧಿ ಆಗಬಹುದು. ಡಂಕೆಲ್ ಪ್ರಸ್ತಾವದಲ್ಲಿ ದೇಶ ಹಿತಕ್ಕೆ ಧಕ್ಕೆ ಬರುವಂತಹದು ಅಂತರ್ರಾಷ್ಟ್ರೀಯ ವಾಣಿಜ್ಯ ವ್ಯವಹಾರಗಳ ಬಗ್ಗೆ ನಿರ್ಬಂಧ ಇರಬೇಕೂಂತ ನನ್ನ ಅಭಿಪ್ರಾಯ. ನಮ್ಮ ದೇಶದ ಹಿತ – ಅಂದ್ರೆ, ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಬಹುಮುಖ್ಯವಾಗಿ ಪರಿಸರ ಹಿತ –

ಇವುಗಳನ್ನೆಲ್ಲಾ ನಾವು ಗಮನದಲ್ಲಿಟ್ಟುಕೊಂಡು ಇಂಟೆಲೆಕ್ಚುಯಲ್ ಪ್ರಾಪರ್ಟಿ ರೈಟ್ಸ್ ಬಿಟ್ಟುಕೊಡದೆ ಬಹಳ ಎಚ್ಚರಿಕೆಯಿಂದ ಜಾಗತಿಕ ಮಾರುಕಟ್ಟೆಗೆ ಕಾಲಿಡಬೇಕು – ಸಗಣಿ ವ್ಯಾಪಾರದಲ್ಲಂತೂ ಜಾರಿ ಬೀಳುವ ಸಾಧ್ಯತೆಗಳು ಬಹಳ ಇವೆ ಅಂತ ನನ್ನ ಗುಮಾನಿ.

ರಾಜಣ್ಣನ ಬೌದ್ಧಿಕತೆಗೆ ತಲೆದೂಗುತ್ತಾ ಎಚ್ಚರಿಕೆಯಿಂದ ಕಾಲ್ತೆಗೆದು ವಿದೇಶೀ ವ್ಯಾಪಾರ ಮತ್ತು ರಫ್ತು ವಹಿವಾಟಿನಲ್ಲಿ ಸಾಕಷ್ಟು ಯಶಸ್ಸು ಗಳಿಸಿ, "ನನ್ನ ಯಶಸ್ಸಿನ ಗುಟ್ಟು" ಎಂಬ ವಿಷಯದಲ್ಲಿ ರೇಡಿಯೋ ಭಾಷಣ ಪ್ರಸಾರ ಮಾಡಿದ್ದ ಗುಡಾ ಗುಡಿಯವರನ್ನು ಭೆಟ್ಟಿಯಾಗಿ ನನ್ನ ಸಂದರ್ಶನದ ನಿಮಿತ್ತವನ್ನು ಜಾಹೀರು ಮಾಡಿದೆ. ಅವರು ತಮ್ಮ ಚೇಂಬರ್‌ನ ಸುಖಾಸನದಲ್ಲಿ ನನ್ನನ್ನು ಕುಳ್ಳಿರಿಸಿ 'ಚಹಾ ಬಿಸ್ಕೂಟು' ತರಿಸಿ ಆದರದಿಂದಲೇ ಸತ್ಕರಿಸಿದರು. ಅನಂತರ ತಮ್ಮ ವಿಚಾರಲಹರಿಯನ್ನು ಸುರಳೀತ ಬಿಚ್ಚಿ ನನ್ನ ಮುಂದಿಟ್ಟರು.

**ನಾನು:** ಹಾಲೆಂಡಿನ ಸಗಣಿಯನ್ನು ನಾವು ಕೊಂಡುಕೊಳ್ಳೋ ಬಗ್ಗೆ, ಒಬ್ಬ ಯಶಸ್ವೀ ಉದ್ಯಮಿಯಾಗಿ ನಿಮ್ಮ ಅಭಿಪ್ರಾಯ ಏನು?

**ಗುಡಾಗುಡಿ:** ಈ ಖಬರ ಕೇಳಿ ನಂಗೂ ಒಮ್ಮೆಲೇ ಭಪ್ಪರೇ ಅನ್ನಿಸ್ತಪಾ. ನಮ್ಮ ಅಜ್ಜ ಹೇಳಿದ್ದ ನೋಡ್ರೀ, ಯಾವುದೊಂದು ಪದಾರ್ಥಾನೂ ಸುಳ್ಳೇ ಹೊರಗೆ ಚೆಲ್ಲಬಾರ್ದು. ಅದ್ರಿಂದ ಏನಾದ್ರೂ ನಫೆ ಹೊಡೀಭೋದೋ ಹ್ಯಾಂಗೆ ಅಂತ ವಿಚಾರ ಮಾಡ್ಬೇಕು. ಯಾಕ್ರೀ? ಈ ಸಮ್ಮಂದ ನನ್ನ ಆಕ್ಷೇಪ ಏನಪಾಂದ್ರೆ, ಇದನ್ನು ನಾವಾ ಯಾಕ ಪರದೇಶದವರಿಗೆ ಮಾರಲಿಕ್ಕ ಪ್ರಯತ್ನ ಮಾಡಲಿಲ್ಲ? ಯಾಕ್ರೀ? ನಮ್ಮಲ್ಲಿ ಏನು ಕೊರತಿ ಐತಿ? ಆಕಳಾ ಇಲ್ವಾ, ಎಮ್ಮಿ ಇಲ್ವಾ? ಆವೇನು ಮೇದು ಹೊಟ್ಟಿ ಕಟ್ಟಿಕೊಂಡು ಕುಂತಾವೇನು? ಅವೂ ಶೆಗಣಿ ಹಾಕೇ ಹಾಕ್ತಾವು. ನಾವೂ ನಮ್ಮ ದೇಶದ ಶೆಗಣೀನ ಬೇರೆ ದೇಶದಾಗೆ ಪ್ರಚಾರ ಮಾಡಬೇಕು. ಹೀಂಗ ಮಾಡಿದ್ರೆ ನೋಡ್ರಿ ನಮ್ಮ ಪರಂಪರೆ, ಸಂಸ್ಕೃತಿ, ನಮ್ಮ ಮಹತ್ವದ ಪರಿಮಳ ಬೇರೆ ದೇಶದಾಗ ಹರಡೋದ್ರಲ್ಲಿ ಸಂಶೆ ಇಲ್ಲ. ಬೇರೆ ದೇಶದೋರ ಜೋಡಿ ಸಾಂಸ್ಕೃತಿಕ ವಿನಿಮಯ ಒಪ್ಪಂದ ತಗೊಂಡು ಏನು ಮಾಡ್ತೀರಿ? ಪ್ರಶಸ್ ಫಾರೀನ್ ಎಕ್ಸ್‌ಚೇಂಜ್ ಹಾಳು. ಯಾಕ್ರೀ? ನಮ್ಮ ದೇಶದ ಶೆಗಣಿ ಬೇರೆ ದೇಶದ ಶೆಗಣೀಗಿಂತ ಯಾವುದೇ ಪರಿಯಲ್ಲೂ ಕಮ್ಮಿ ಇಲ್ಲಾಂತ ನಾವು ಇಡೀ ಜಗತ್ತಿಗೇ ತೋರಿಸಿಕೊಡಬೇಕಾದ ಸಂದರ್ಭ ಬಂದೈತಿ, ನೋಡ್ರೀ. ಬೇಕಾದ್ರೆ ISI, ISO - 9000, ISO - 9001 ಬೇಕಾದ್ ಛಾಪು ಹೊಡೆಸಿ, Star

T.V, Zee T.V, MTV, BBC ಎಲ್ಲಾ ಕಡೇನೂ ಎಡ್ವರ್‌ಟೈಜ್‌ಮೆಂಟ್ ರಿಲೀಸ್ ಮಾಡಿಸಿ ಭಯಂಕರ ಗದ್ದಲಹಾಕಬಹುದು. ಯಾಕ್ರೀ? ಬಂಗಾರದಂಥ ಶೆಗಣೇನ ತಿಪ್ಪೀಗೆ ಒಗೀತಿದಾರಲ್ಲ – ಯಾಕ್ರೀ?

ನನ್ನ ತಲೆ ಗಿರ್ರ್‌ಂದು ತಿರುಗುತ್ತಿತ್ತು. ಸಾವರಿಸಿಕೊಂಡೆ.

**ನಾನು:** ಎಷ್ಟೇ! ನೀವು ಅನ್ನೋದು ಬರೋಬ್ಬರಿ ಐತಿ ಬಿಡ್ರಿ.

**ಗುಡಾಗುಡಿ:** ಹೌದಲ್ಲೊ? ಛಲೋ ಆತು. ತಗೋರಿ ನನ್ನ ಫೋಟೋ. ನನ್ನ ಅಭಿಪ್ರಾಯದ ಜೋಡಿ ಇದನ್ನೂ ಛಾಪಿಸಿ ಬಿಡ್ರಿ.

ಫೋಟೋವನ್ನು ಕಿಸೆಗೆ ಸೇರಿಸಿ ಎದ್ದಾಗ ಭಯಂಕರ ಬೆವರು ಕಿತ್ತುಕೊಂಡಿತ್ತು. ಮುಂದೆ ಇನ್ನೂ ಎಷ್ಟೊಂದು ಮಂದಿಯ ಸಂದರ್ಶನ ತೆಗೆದುಕೊಳ್ಳುವುದಿದೆಯೆಂದು ನೆನಪಾಗಿ ಹೈರಾಣಾದೆ. ಅದು ಸರಿ, ಮಂದೀ ಅಭಿಪ್ರಾಯ ಕೇಳೋಕಿಂತ ಮೊದಲು ನನ್ನದೇ ಸ್ವಂತ ಪ್ರತಿಕ್ರಿಯೆಯಾದರೂ ಏನು? ಅದನ್ನಾದರೂ ಮೊದಲು ಸ್ಪಷ್ಟ ಪಡಿಸಿಕೊಂಡರೆ ಅದು ಯಾರದ್ದಾದರೂ ಪ್ರಾಕ್ಸಿ ಅಭಿಪ್ರಾಯವಾಗಿ ಸ್ಟ್ಯಾಂಡ್ ಬೈ ಮೆಟೀರಿಯಲ್ ಆದರೂ ಆಗಬಹುದು ಎನಿಸಿ ನನ್ನನ್ನು ನಾನೇ ಸಂದರ್ಶಿಸಿಕೊಂಡೆ.

**ನಾನು:** ಏನಪ್ಪಾ, ಮಂದೀನ ಕೇಳಾಕೆ ಹೊಂಟಿ, ನಿಂದೇ ಸ್ವತಾ ಅಬಿಪ್ರಾಯನಾದ್ರೂ ಏನು? ಖರೇ ಹೇಳು.

**ನಾನು:** ಗುಡಾಗುಡಿಯ ಮಾತಿನ ಇಮಿಟೇಶನ್ ಯಾಕೆ ಮಾಡ್ತೀಯೋ ಮಗ್ನೇ, ಸಿಂಪಲ್ಲಾಗಿ ಮಾತಾಡು.

**ನಾನು:** ಆಯ್ತು, ಆಯ್ತು, ಅಷ್ಟಕ್ಕೆಲ್ಲಾ ಯಾಕೆ ವ್ಯಂಗ್ಯ, ಹೀಯಾಳಿಕೆ. ಅದೂ ಕನ್ನಡವೇ. ಗುಂಡುಮೆಟ್ಟಿನ ಕನ್ನಡ. ಇರಲಿ. ನೀನೂ ನಾನೇ ಆಗಿರೋದ್ರಿಂದ ನಾನೇ ನಿನ್ನ ಸಂದರ್ಶನ ಮಾಡ್ತೀನಿ. ಈ ಸಗಣಿ ವ್ಯಾಪಾರದ ಬಗ್ಗೆ ನಿನ್ನ ಖಚಿತ ನಿಲುವು ಏನು? ಬೇಕಾದ್ರೇ ನೀನೂ ನನ್ನನ್ನ ಮಧ್ಯ ಮಧ್ಯೆ ಸಂದರ್ಶನ ಮಾಡಬಹುದು. ಹುಂ! ಹೇಳು. ಬಿ ಬ್ರೀಫ್ ಅಂಡ ಟು ದಿ ಪಾಯಿಂಟ್

**ನಾನು:** ಇದೊಂದು ಹೊಸ ವಿಚಾರ. ಶಿಥಿಲಗೊಂಡ – ಅಲ್ಲ, ಅಲ್ಲ, ಉದಾರೀಕೃತ ಆರ್ಥಿಕ ನೀತಿಯ ನೇರ ಪ್ರಯೋಜನ ಈ ರೀತಿ ಪರದೇಶದವರಿಗೆ ಸಿಗ್ತಾ ಇರೋದು ಯಾಕೋ ಸರಿಯಲ್ಲ ಅನ್ನಿಸುತ್ತೆ. ಆದ್ರೆ ಅಂತರ್‌ರಾಷ್ಟ್ರೀಯ ವ್ಯಾಪಾರಾನ ನಾವು ಈಗ ಅಂದ್ರೆ,

ಇಪ್ಪತ್ತೊಂದನೇ ಶತಮಾನದ ಹೊಸಿಲಿನಲ್ಲಿ ಸಂಕುಚಿತ ದೃಷ್ಟಿಯಿಂದ ನೋಡಬಾರದು. ಯಾಕೇಂದ್ರೆ ಅದು ಅವೈಜ್ಞಾನಿಕ.

**ನಾನು:** ಅದು ಹೇಗೆ ಅವೈಜ್ಞಾನಿಕ?.

**ನಾನು:** ನೋ ಮೋರ್ ಆರ್ಗ್ಯುಮೆಂಟ್ಸ್ ಅಬೌಟ್ ಇಟ್. ಯಾವುದು ಎಲ್ಲಿ ಸುಲಭ ಬೆಲೆಗೆ ದೊರಕುತ್ತದೋ ಅದನ್ನ ಅಲ್ಲಿಂದ ಖರೀದಿ ಮಾಡೋದು ಆರ್ಥಿಕ ಸಿದ್ಧಾಂತದ ಪ್ರಕಾರ ವಿವೇಕ, ರಿಮೆಂಬರ್, ಮ್ಯಾನ್ ಈಸ್ ಎ ರ್‍ಯಾಶನಲ್ ಅನ್‌ಮಲ್.

**ನಾನು:** ರಿಕಾರ್ಡೋನ ಥಿಯರಿ ಆಫ್ ನ್ಯಾಚುರಲ್ ಅಡ್ವಾಂಟೇಜ್ ಪ್ರಕಾರ ಸಗಣಿ ಉತ್ಪಾದನೆ ಹಾಲೆಂಡಿನಲ್ಲಿ ಕಮ್ಮಿ ಖರ್ಚಿನಲ್ಲಿ ಆಗುತ್ತದೋ ಅಥ್ವಾ ನಮ್ಮ ದೇಶದಲ್ಲೋ ಅಂತ ತುಲನಾತ್ಮಕವಾಗಿ ನೋಡಬೇಕು. ಈಗ ಆ ದೇಶದವರು ಸಗಣೀನ ಮಾರೋದಕ್ಕೆ ನಮ್ಮ ದೇಶ ಯೋಗ್ಯ ಅಂತ ಪರಿಗಣಿಸಿರೋದು ನಮಗೊಂದು ಪ್ರತಿಷ್ಠೆಯ ಮಾತೋ ಅಲ್ಲವೊ? ಯೋಚಿಸು. ಆ ಸರಕಿಗೆ ಅವರು ಸ್ವದೇಶದ ಬೇಡಿಕೆಯನ್ನು ಪೂರೈಸಿ, ಉಳಿದ ಹೆಚ್ಚಳವನ್ನು ನಮ್ಮಂಥ ಸಂಪದ್ಭರಿತ ಸಾಂಸ್ಕೃತಿಕ ಪರಂಪರೆಯವರಿಗೆ ಮಾರಲು ಬಂದಿದ್ದಾರೆ ಅಂತ ತರ್ಕಬದ್ಧವಾಗಿ ಊಹಿಸಿಕೊಳ್ಳೋದೇನೂ ಕಷ್ಟವಾಗೋದಿಲ್ಲ. ನಮಗೆ ಮಾರದಿದ್ದರೆ ನಷ್ಟವಿಲ್ಲ. ಅನ್ನೋ ಪರಿಸ್ಥಿತಿಯೂ ಅಲ್ಲಿ ಉದ್ಭವಿಸಿರಬಹುದು. ಕೊಳ್ಳದಿದ್ದರೆ ನಮಗೆ ಲಾಭವೇ, ನಷ್ಟವೇ? Supply side Economics ನ curve and Demand & supply curves of classical Economics ಈ ವಿಚಾರದಲ್ಲಿ ನಮಗೆ ಹೇಗೆ ಮಾರ್ಗದರ್ಶನ ಮಾಡಬಹುದು? ನೀನೇ ಯೋಚಿಸು. ಆ ಕಷ್ಟಾನ ನನಗೆ ಕೊಡಬೇಡ. ಈ ವ್ಯವಹಾರದಲ್ಲಿ ಏನೂ ಮೋಸ scam ಇಲ್ಲವೇ?

**ನಾನು:** ಅವರು consume ಮಾಡೋವಷ್ಟನ್ನ ಮಾಡಿ ಉಳಿದ ಭಾಗದ ವಿಲೇವಾರಿಗಾಗಿ ಹೊಸ ಭೋರ್ಕ್ತಗಳನ್ನು – I dont know whether it is the proper word - ಹುಡುಕ್ತಾ ಇದಾರೆಯೇ?

**ನಾನು:** ಇರಬಹುದು. ಒಂದು ಸರಕು ಯಾವುದೇ ಕಾರಣಕ್ಕೆ ಅಧಿಕಾಧಿಕವಾಗಿ ಉತ್ಪಾದನೆಯಾಗಿ – May be wrong planning ಅದಕ್ಕೆ ತಕ್ಕ ಪ್ರಮಾಣದಲ್ಲಿ ಗ್ರಾಹಕರಿಂದ ಬೇಡಿಕೆ ಬರದಿದ್ದರೆ ಸಮಸ್ಯೆಗಳು

ಉದ್ಭವಿಸುತ್ತವೆ. ಸಗಣಿಯಿಂದ ಉದ್ಭವಿಸುವ ಪರಿಸರ ಸಂಬಂಧೀ ಸಮಸ್ಯೆಗಳು ನಿಜಕ್ಕೂ ಉತ್ಪಾದಕರ ತಲೆ ತಿಂದಿರಬಹುದು.

ನಾನು: ಅಂದ್ರೆ, ಹಾಲೆಂಡಿನಲ್ಲಿ ತಮಗೆ ಅಗತ್ಯವಿರುವ ಪ್ರಮಾಣಕ್ಕಿಂತ ಹೆಚ್ಚಿನ ಮಟ್ಟದ ಸಗಣಿಯ ಉತ್ಪಾದನೆ ಮಾಡ್ತಾ ಇದಾರೆ ಅಂತ ತಿಳಿಯಬಹುದೇ ಮಹಾಶಯ?

ನಾನು: Damn with your ನಾಟಕೀಯತೆ. ಖಂಡಿತವಾಗಿ ಅವರಿಗೆ ಅಷ್ಟೊಂದು ದೊಡ್ಡ ದೊಡ್ಡ ತಿಪ್ಪೆ ರಾಶಿಗಳು ಬೇಕಾಗೋದಿಲ್ಲ. For the simple reason, ಅವರು ಗೋಮೆ ಹಚ್ಚೋದಿಲ್ಲ, ಎಟ್‌ಸೆಟ್ರಾ

ನಾನು: ಹೌದು! ನಮ್ಮಜ್ಜಿ ಬೆಳಗ್ಗೆ ಎದ್ದು ಹೊಸಿಲು ಸಾರಿಸೋದಕ್ಕೆ ಈ ಹಾಳು ಬೆಂಗ್ಳೂರಿನಲ್ಲಿ ಒಂದು ಪಿಡಿಚೆ ಸಗಣಿ ಸಿಕ್ಕೋದಿಲ್ಲ ಅಂತ ಗೊಣಗುಟ್ಟೋದನ್ನ ಕೇಳಿ ಪಟ್ಟಿರ್ಕೇ. ಹೌಸಿಂಗ್ ಬೋರ್ಡ್ ಕಟ್ಟಿದ ನಾಕನೇ ಮಹಡಿ ಮನೇಲಿ ನಾನಿರೋದು. ಬಾಡಿಗೆಗೆ.

ನಾನು: Whatever that may be, don't mix Tamil, even for fun in our lovely ಕನ್ನಡ. ಭಾಷಾ ಸಂಕರಂ ಮಾಕುರು. ತದ್ವ್ರತಂ. ಹೋಗ್ಲಿ. ಇಂಪೋರ್ಟೆಡ್ ಸಗಣಿ is good for ಗೋಮೆ and all that ಅಂತ ನಾನು ಹೇಳೋದಿಲ್ಲ. It may be a good biofertiliser. ಪಂಚಗವ್ಯಕ್ಕೂ ಅದು ಬರೋದಿಲ್ಲ.

ನಾನು: Bur why? ಸಾರಿ, ಯಾಕೆ?

ನಾನು: For the simple reason that the ಸಗಣಿ is produced by a ಮ್ಲೇಚ್ಛ cow. ಅದೂ ಅಲ್ದೆ, ಅದಕ್ಕೆ ಬೇಕಾಗೋ ವಿದೇಶೀ ವಿನಿಮಯ ........ Economics, my boy ........

ನಾನು: ಓಹ್! ನಾವು ಈಗಾಗ್ಲೇ Milk - Power export ಮಾಡೋ ಸಾಮರ್ಥ್ಯ ಗಳಿಸಿದೀವಿ ಅಂತ ಎಲ್ಲೋ ಓದಿದ ನೆನಪು. ಅದರಿಂದ ಬಂದ ವಿದೇಶೀ ವಿನಿಮಯ ಹಣವನ್ನ ಸಗಣಿ ವ್ಯಾಪಾರದಲ್ಲಿ invest ಮಾಡಬಹುದು. ಖೋತಾ ಬಂದ್ರೆ, NRIಗಳ domestic remittances ಮೇಲಿನ discount rate hike ಮಾಡಬಹುದು.

ನಾನು: ಅಷ್ಟೇ ಅಲ್ಲ, ಮ್ಲೇಚ್ಛ cow dung ಜೊತೆ ಹಂದಿ dung ಬೆರೆಸಿ ಪ್ಯಾಕಿಂಗ್ ಚಾರ್ಜ್ ಬೇರೆ ಸೇರಿಸುತ್ತಾರೆ. value added product. ಒಂದು ಹಸು ಅಥವಾ ಒಂದು ಎಮ್ಮೆ ಒಂದು ದಫ ಹಾಕೋ ತೊಪ್ಪೇಗಿಂತ ಒಂದು ಪ್ಯಾಕ್ Envirodung - ವಿದೇಶೀ ಸಗಣಿ ಹೆಸರು – ಹೆಚ್ಚು ಬೆಲೆ ಬಾಳತಕ್ಕ ಸರಕು ಅಂತ ನಮ್ಮ ಜನ ಒಪ್ಪಿಕೋಬಹುದೆ? It is a question of acceptability.

ನಾನು: Foreign ಮಾಲು ಅಂದ್ರೆ ನಮಗೊಂದು ವೀಕ್‌ನೆಸ್ ಇದ್ಯಾಲ್ಲ, ಹಾಳಾದ್ದು.

ನಾನು: ಅದ್ರೂ ಚಿನ್ನದ ಸೂಜಿ ಅಂತ ಕಣ್ಣು ಚುಚ್ಚಿಕೊಳ್ಳೋದಕ್ಕೆ ಆಗುತ್ಯೇ?

ನಾನು: ರೆಟರಿಕ್ಸ್ ಸಾಕು. ಕೆಮಿಕಲ್ ಫರ್ಟಿಲೈಸರ್ಸ್ ಮೇಲಿನ ಸಬ್ಸಿಡೀನ ನ್ಯೂ ಇಕನಾಮಿಕ್ ಪಾಲಿಸಿ ಪ್ರಕಾರ ತೆಗೆದ್ರೆ ಬಯೋಫರ್ಟಿಲೈಸರ್ಸ್ ನಮ್ಮ ದೇಶದ ಬೇಡಿಕೆಗೆ ಅನುಗುಣವಾಗಿ ನಮ್ಮ ದೇಶದಲ್ಲೇ ಉತ್ಪಾದನೆ ಆಗ್ತಾ ಇದ್ಯೇ ಇಲ್ಲವೇ?It is a question of constipation of our cattle wealth.

ನಾನು: ಹಾಲನ್ನ ಜಾಸ್ತಿ ಉತ್ಪಾದನೆ ಮಾಡೋ ಫೀಡ್ಸ್ ಉಪಯೋಗಿಸಬಹುದಲ್ಲ?

ನಾನು: ಎಗೇನ್, ಅದಕ್ಕೆ ಬೇಕಾದ ಟೆಕ್ನಾಲಜಿ, ನೋ ಹೌ import ಮಾಡಿಕೋ ಬೇಕಲ್ಲ? ಅದಕ್ಕಿಂತ ಎನ್ವಿರೋಡಂಗ್ ಚೀಪ್ ಅಂತ ಅವರು ಅಡ್ವರ್‌ಟೈಸ್ ಮಾಡಿದ್ರೆ?

ನಾನು: ಹಾಗಾದ್ರೆ ನಮ್ಮ Priority ಏನೂಂತ ಯೋಚನೆ ಮಾಡಬೇಕು. ಸಗಣಿ ವಿಚಾರದಲ್ಲಿ ನಮ್ಮ ಕಾಲ ಮೇಲೆ ನಾವೇ ನಿಂತುಕೊಳ್ಳೊವಂಥ ಆರ್ಥಿಕ ಯೋಜನೆ ......

ನಾನು: ಫ್ಲಾನಿಂಗ್ ಕಮಿಶನ್‌ಗೆ ಈ ವಿಚಾರ ಹೊಳೆಯುತ್ಯೇ?

ನಾನು: ಹೊಳೆಯಲಿ ಬಿಡಲಿ, ನಾನು ಈ ಇಂಟರ್‌ವ್ಯೂನ ಪೂರ್ತಿ ಬರೆದು ಕೊಡ್ತೀನಿ. ಪೇಪರ್‌ನಲ್ಲಿ ಬರುತ್ತೆ, ನನ್ನ ನಿನ್ನ ಫೋಟೋ ಸಮೇತ ನನ್ನ image ಬೆಳೆಯುತ್ತೆ.

ನಾನು: ನಿನ್ನ ಇಮೇಜ್ ಬೆಳೆಯೋದಕ್ಕೆ ಇದೇ ಯೋಗ್ಯವಾದ ಫರ್ಟಿಲೈಸರ್. ಗೋ ಅಹೆಡ್. ಗುಡ್‌ಲಕ್.

ನನ್ನನ್ನು ನಾನೇ ಸಂದರ್ಶಿಸಿಕೊಂಡು ಬೌದ್ಧಿಕವಾಗಿ ಸುಸ್ತಾಗಿದ್ದೆ. Damn with the rest of the cross - section ಅಂದುಕೊಂಡು ಹತ್ತಿರದ ಬಸ್‌ಸ್ಟಾಪ್‌ಗೆ ಬಂದು ಬೆಂಚಿನ ಮೇಲೆ ಒರಗಿದೆ. ಕಾಲ ಬಳಿ ಮೆಲಕು ಹಾಕುತ್ತಾ ಒಂದು ಹಸು ಮಲಗಿತ್ತು. ಅದನ್ನೇ ನೋಡುತ್ತಾ ಆಕಳಿಸಿ ಕಣ್ಣುಮುಚ್ಚಿದೆ. Intellectual fatigue. ಹಸು 'ಅಂಬಾ' ಎನ್ನುತ್ತಾ ಮೈ ಝಾಡಿಸಿ ಎದ್ದು ನಿಂತಿತು.

"ಒಳ್ಳೇದು. ಡಚ್ ಎನ್ನರೋಡಂಗ್ ಇಂಪೋರ್ಟ್ ಮಾಡ್ಕೊತಾರಂತೆ. ನಿನ್ನ ಪ್ರತಿಕ್ರಿಯೆ?" ಎಂದೆ.

ಬಾಲದಿಂದ ಬೆನ್ನಿನ ಮೇಲಿನ ನೊಣಗಳನ್ನು ಗುಡಿಸಿ ಮತ್ತೊಮ್ಮೆ 'ಅಂಬಾ' ಎಂದು ತುಂಟ ನಗುವನ್ನು ಬೀರುತ್ತಾ ಅದು, "ಇಟ್ಟರೆ ಸಗಣಿಯಾದೆ, ತಟ್ಟಿದರೆ ಕುರುಳಾದೆ, ಸುಟ್ಟರೆ ನೊಸಲಿಗೆ ವಿಭೂತಿಯಾದೆ, ತಟ್ಟದೆ ಹಾಕಿದರೆ ಮೇಲು ಗೊಬ್ಬರವಾದೆ, ನೀನಾರಿಗಾದೆಯೋ ಎಲೆ ಮಾನವ" ಎಂದು ಸವಾಲು ಹಾಕಿದಂತೆ ಕೇಳಿಸಿತು. ಗಾಢನಿದ್ದೆ ಆವರಿಸಿತು. ಎಚ್ಚರವಾದಾಗ ಕತ್ತಲು. Power supply failure. ನನ್ನ ಸಂಪಾದಕ ನನಗೆ ಕೊಟ್ಟಿದ್ದ ಕಾಲದ ಗಡುವು ಮಿಂಚಿ ಹೋಗಿತ್ತು. ನನಗೆ ಬೈಲೈನ್ ಯೋಗವಿಲ್ಲ. ಮಹತ್ವಾಕಾಂಕ್ಷೆಯ ಸ್ವರ್ಗದ ಬಾಗಿಲು ಮುಚ್ಚಿ ಹೋಗಿತ್ತು. ಕುಸಿದೆ.

---

# ಬದುಕಲು ಕಲಿಯಿರಿ

ಶೀನೂ

ಮೊನ್ನೆ ಶನಿವಾರ ಸಂಜೆ ಕ್ಲಬ್ಬಿನಲ್ಲಿ ಕೂತಿದ್ದೆ. ಸಂಜೆ ಮುಗಿಲಿಗೆ ಅದೇ ಆಗ ಕೆಂಪಡರ ತೊಡಗಿತ್ತು. ಇಡೀ ವಾರದ ಕೆಲಸದಿಂದ ದಣಿದು ಹಣ್ಣಾದ ಮನ ಹಗೂರಾಗಿ ಅರಳತೊಡಗಿತ್ತು. ಗೆಳೆಯರೂ ಒಬ್ಬೊಬ್ಬರಾಗಿ ಜಮಾಯಿಸ ತೊಡಗಿದ್ದರು. ಪರಮಾತ್ಮ ಗುಟುಕು ಗುಟುಕಾಗಿ ಪ್ರತ್ಯಕ್ಷನಾಗತೊಡಗಿದ್ದ. ಇನ್ನೇನು ಶನಿವಾರದ ಸಂಜೆಯಲ್ಲಿ ನಾನು ಪೂರ್ತಿಯಾಗಿ ಮುಳುಗಿ ಹೋಗಬೇಕು. ಅಷ್ಟರಲ್ಲಿ ಬೇರರ್ ಬದ್ರುದ್ದೀನ ಬಂದು ನನಗೆ 'ಫೋನ್' ಇದೆಯೆಂದ. ನಾನು ಬೇಸರದಲ್ಲಿ ಎದ್ದೆ.

ಫೋನಿನಲ್ಲಿ ಗಾಬರಿಯ, ಆತಂಕದ ದನಿಯಲ್ಲಿ ಪರಮೇಶಿ "ಶೀನೂ ನಿನ್ನೆ ಸಂಜೀಕೆ ಶಿವಣ್ಣ ಮಾಸ್ತರೂ ನಾನೂ ಬೆಂಗಳೂರಿಗೆ ಬಂದೇವಿ. ಇವತ್ತ ಗಾತ ಆಗೇತಿ. ಮಾಸ್ತರಿಗೆ ಹೊಡೆತ ಬಿದ್ದೈತಿ ತೆಲಿ ಒಡದೈತಿ, ಎಡಗೈ ಮುರದೈತಿ. ಆಸ್ಪತ್ರಿಗೆ ಹಾಕೇನಿ. ನಿನ್ನ ಕರಕೊಂಬಾ ಅನ್ನಾಕ ಹತ್ಯಾರು. ನಾ ಈಗ ಬರತೇನಿ ಅಲ್ಲೇ ಇರು. ಇನ್ನು ತೊಗೋಳಾ ಹೌದಲ್ಲೋ? ಮಾಸ್ತರ ಹಂತ್ಯಾಕ ಬರೂದೈತಿ ಬಹಾಳ ತೊಗೋಬ್ಯಾಡ" ಎಂದೆಲ್ಲ ಹೇಳಿ ನನ್ನ ಮಾತಿಗೆ ಅವಕಾಶ ಕೊಡದಲೇ ಫೋನು ಕುಕ್ಕಿಬಿಟ್ಟ.

ಈಗ ನನಗೆ ಚಡಪಡಿಸುತ್ತ ಪರಮೇಶಿಯ ದಾರಿ ಕಾಯುವದಲ್ಲದೇ ಬೇರೇ ಮಾರ್ಗವೇ ಇರಲಿಲ್ಲ.

ಶಿವಣ್ಣ ಮಾಸ್ತರೂ, ಪರಮೇಶಿ ಇಬ್ಬರೂ ಕೂಡಿ ಆವಾಗೀವಾಗ ಧಾರವಾಡದಿಂದ ಬೆಂಗಳೂರಿಗೆ ಕೆಲಸದ ನಿಮಿತ್ತ ಬಂದಿರತಾರ. ಈ ಸರೇನೂ ಹಂಗಂತS ಬಂದಿರಬೇಕು. ಆದರ ಶಿವಣ್ಣ ಮಾಸ್ತರಿಗೆ ಹೊಡೆತ ಯಾಕೆ ಬಿತ್ತೋ ತಿಳಿಯದೇ ಕಂಗೆಟ್ಟು ಕೂತೆ.

ಮಾಸ್ತರು ಹಳೇ ಕಾಲದವರು. ಗಾಂಧೀವಾದಿ ಸ್ವಾತಂತ್ರ್ಯ ಸಮರದಾಗ ಜೇಲು ಕಂಡವರು. ಎಲ್ಲೆಲ್ಲಿ ಅನ್ಯಾಯ ಇದೆಯೋ ಅದನ್ನ ಎದುರಿಸಿಯೇ ತೀರತೇನಿ ಅನ್ನುವ ಛಲ. ಜಗತ್ತನ್ನು ತಿದ್ದತೇನಿ, ಸಮಾಜದ ಓರೆಕೋರೆಗಳನ್ನು ಸರಿಪಡಿಸಿಯೇ ತೀರತೇನಿ ಅನ್ನೋ ಹಟ. ಆದರೆ ಇನ್ನೊಬ್ಬರಿಗೆ ಎಂದೂ ಕೆಟ್ಟ ಬಯಸಿದವರಲ್ಲ. ದೇವಭೋಳೆ ಮನಿಶಾ, ಪ್ರಾಮಾಣಿಕ ಸತ್ಯನಿಷ್ಠ ವ್ಯಕ್ತಿತ್ವ, ಜಗಜ್ಯೋತಿ ಬಸವೇಶ್ವರ, ಮಹಾತ್ಮಾಗಾಂಧಿ, ಶಿಶುನಾಳ ಶರೀಫ, ಶಿರಡಿ ಸಾಯಿಬಾಬಾ ಇವರೆಲ್ಲ ಇನ್ನೊಮ್ಮೆ ಹುಟ್ಟಿ ಬಂದು ಒಬ್ಬನೇ ಮನುಷ್ಯನ ರೂಪಧಾರಣ ಮಾಡಿದರ ಹ್ಯಾಂಗ ಇರಬೇಕೋ ಹಂಗ ಇದ್ದರು.

ಇದ್ದರು ಅಂದ್ರ ಇನ್ನೂ ಇದ್ದಾರ. ಹಂಗ ಹಂತಾದ್ದೇನೂ ಆಗಿಲ್ಲ. ಆದರೂ ಹೀಂಗ ಆಗಬಾರದಾಗಿತ್ತು!

ನಾನು ಹಾಯಸ್ಕೂಲ ಕಲಿಯೋ ಮುಂದ ನನಗ ಲಭ್ಯ ಆದ ಎರಡು ಅನರ್ಘ್ಯರತ್ನಗಳ ಪೈಕಿ ಒಬ್ಬರು ಶಿವಣ್ಣ ಮಾಸ್ತರು. ಇನ್ನೊಬ್ಬವಾ ನನ್ನ ಕ್ಲಾಸ್‌ಮೇಟು ಪಾಟೀಲ ಪರಮೇಶಿ. ನಾನೂ ಮತ್ತ ಪಾಟೀಲ ಇಬ್ಬರೂ ಒಂದೆಂಟಹತ್ತ ವರುಷ ಹೈಸ್ಕೂಲ ಕಲಿತೆವು. ಹಾಂಗ ನೋಡಿದರ ಶಿಕ್ಷಣ ಲಗೂನ ಮುಗಿಸಬೇಕೆಂಬೋ ಅವಸರ ನಮಗೇನು ಇದ್ದಿದ್ದಿಲ್ಲ. ಆದರ ಪಾಪ ಶಿವಣ್ಣ ಮಾಸ್ತರು ಮನಸಿನ ಮ್ಯಾಗ ತೊಗೊಂಡು, ಬೆನ್ನ ಹತ್ತಿ, ತಮ್ಮ ವಿದ್ಯಾಯಲ್ಲಾ ಉಪಯೋಗಿಸಿ, ತಮ್ಮ ತಪಸ್ಸನ್ನು ಧಾರೆಯೆರೆದು ಅಂತೂ ನಾಲ್ಕನೇ ಪ್ರಯತ್ನಕ್ಕಂದ್ರ ನಮ್ಮನ್ನ ಎಸ್.ಎಸ್.ಸಿ ಪಾಸ ಮಾಡಿಸಿ ಹೊರಗ ಅಟ್ಟಿದ್ದರು.

ಶಿವಣ್ಣಾವರ ಸಮಸ್ತ ಪ್ರಪಂಚ ಅವರು ಕಲಿಸುತ್ತಿದ್ದ ಶಾಲೆಗೆ ಎಂದರೆ ನಮ್ಮ ಶಾಲೆಗೆ ಸೀಮಿತವಾಗಿತ್ತು. ಅದರಲ್ಲಿ ಅವರ ಜೀವ ಎಲ್ಲಾ ವಿದ್ಯಾರ್ಥಿಗಳಿಗೆ ವಿಶೇಷತಃ ನಮ್ಮಂತಹವರಿಗೇ ಮೀಸಲಾಗಿತ್ತು. ಅವರೇ ಹೇಳೂ ಹಂಗ "ಸ್ಕಾಲರ್ ಹುಡುಗರದೇನು ಹೆಂಗೂ ಆಕ್ಕೈತಿ. ನನಗೆ ನಿಮ್ಮದs ಚಿಂತಿ" ಅನಕೋತ ನಮ್ಮ ಹೈಸ್ಕೂಲು ಮುಗಿಯುವ ವರೆಗೆ, ನಮ್ಮ ಗುರುಗಳಾಗಿ, ಹಿರಿಯರಾಗಿ, ರಕ್ಷಕರಾಗಿ, ಶಿಕ್ಷಕರಾಗಿ ನಮ್ಮ ಬೆನ್ನ ಹಿಂದಿನ ದೈವವಾಗಿ, ನಮ್ಮನ್ನ ಸಲುಹಿದರು. ಆವಾಗಿನ ಕಾಲಕ್ಕ "ಗುರುಜನ" ಮತ್ತು "ಗಾರ್ಡಿಯನ್" ರೊಳಗೆ ಬಹಳ ಭೇದ ಇದ್ದಿದ್ದಲ್ಲ. ಹಂಗಾಗಿ ಶಿಟ್ಟಿಗೇಳಲಿ, ಹೊಡೀಲಿ, ಬಡೀಲಿ ಏನ ಆದರೂ ಹುಡುಗೂರು ಸಹಿತ ಶಿವಣ್ಣ ಮಾಸ್ತರ ಅಂದ್ರ ಜೀವಾ ಕೊಡತಿದ್ದರು.

ಶಿವಣ್ಣ ಮಾಸ್ತರು ಮಾಸ್ತರ ಆಗಲಿಕ್ಕೇನ ಅಂತ ಹುಟ್ಟಿದವರು. ಒಂದು ವ್ಯಾಳ್ಯ ಅವರು ಮಾಸ್ತರ ಆಗದಿದ್ರ ಇನ್ನೇನೇನು ಆಗತಿದ್ದರೋ, ಹೇಳೋದು ಕಠಿಣ. ಈಗ ಖರೆನs ಹೇಳಬೇಕಂದ್ರ ನನಗಾಗಲೀ ಪರಮೇಶಿಗೇ ಆಗಲಿ ಹೀಂಗs ಆಗಬೇಕು, ಹಂಗs ಆಗಬೇಕು ಅನ್ನೋ ಹಟ ಎಂದೂ ಇದ್ದಿದ್ದಿಲ್ಲ. ನಾವು ಮನಸ್ಸು ಮಾಡಿದ್ದರ ಬೇಕಾದ್ದು ಆಗಬಹುದಿತ್ತು. ಪ್ರಧಾನ ಮಂತ್ರಿ, ರಾಷ್ಟ್ರಪತಿ, ಮುಖ್ಯ ಕಾರ್ಯದರ್ಶಿ, ಬಸ್ ಕಂಡಕ್ಟರ್, ಟ್ರಾಫಿಕ್ ಪೋಲಿಸ್, ಪೋಸ್ಟ್‌ಮನ್, ಡಾಕ್ಟರ್, ವಕೀಲ, ಹಜಾ ....... ಅಲ್ಲಲ್ಲss ಹೇರ್‌ಡ್ರೆಸ್ಸರ್ ಹಿಂಗ ಯಾವ ಪಾತ್ರ ಬೇಕಾದರೂ ಅದನ್ನ ನಾವು ಸಮರ್ಥವಾಗಿ ನಿರ್ವಹಿಸಬಹುದಿತ್ತು. ನಾವು ಹೋಗಲಿ ಪಾಪ ಅಂತ ಹೇಳಿ ಉಳಿದೆಲ್ಲ ವೇಷಗಳನ್ನು ಬಿಟ್ಟು ಈಗಿನ ನಮ್ಮನಮ್ಮ ಕೆಲಸಕ್ಕ ಬಂದ್ವಿ. ಅಂದರ ಪರಮೇಶಿ ಅಡತಿ ಅಂಗಡಿ ಇಟ್ಟ. ನಾ ಕಾಲೇಜದಾಗ ಲೆಕ್ಚರ್ ಆದೆ. ಆದರ ಶಿವಣ್ಣ ಮಾಸ್ತರದು ಹಂಗಲ್ಲ ಪಾಪ! ಅವರಿಗೆ ನಮ್ಮಂತಹ versatatity ನ ಇದ್ದಿಲ್ಲ. Flexible ಆತ್ಮಿಕ ಶಕ್ತೀನs ಇದ್ದಿದ್ದಿಲ್ಲ. (ಹಂಗಂದ್ರ ಏನು?) ಹಿಂಗಾಗಿ ಅವರು ಬರೇ ಮಾಸ್ತರು ಆದರು.

ಆದರ ಆದದ್ದ ಮಾತ್ರ ಬಲೇ ಕಡಕ್ ಸ್ಟ್ರಿಕ್ಟ ಮಾಸ್ತರ ಆದರು. ಅವರು ಬರೇ ಸಾಲ್ಯಾಗಿನ ಹುಡಗೂರಿಗಷ್ಟೇ ಅಲ್ಲ, ಉಳಿದ ಸಾಲೀ ಮಾಸ್ತರಿಗೆ ಸಹಿತ, ಊರಾಗಿನ ಮಂದಿಗೆ ಸಹಿತ ಮಾಸ್ತರ ಆಗಿದ್ದರು. ಸಜ್ಜನರಿಗೆ ಸಾಥ ಕೊಡತಿದ್ದರು. ಹರತಿಂತವರಿಗೆ ನೀರು ಕುಡಿಸಿ ಬಿಡುತ್ತಿದ್ದರು.

ಒಮ್ಮೆ ನಮ್ಮ ಲೆಕ್ಕದ ಜಾಧವ ಸsರು ಬಿಡುವಿನ ಸಮಯದಲ್ಲಿ ಹಾಟೇಲಿಗೆ ಹೋಗಿ ಬಂದು ಪಾನಪಟ್ಟಿ ತಿನಕೋತ ಸಿಗರೇಟ ಸೇದಿಕೋತ ಸ್ಕೂಲ ಕಾಂಪೌಂಡಿನೊಳಗss ಬಂದ ಬಿಟ್ರು. ಅದನ್ನ ನೋಡಿ ಶಿವಣ್ಣ ಮಾಸ್ತರು ಸಿಟ್ಟಿನಿಂದ ಉರಿದೆದ್ದು, ಜಾಧವ ಮಾಸ್ತರ ಮುಂಗೈ ಗಟ್ಟಿ ಹಿಡಿದು "ಮೊದಲನೇದು ನೀವು ಹಿಂತಾ ವ್ಯಸನಾ ಮಾಡಬಾದು. ಒಂದ ವ್ಯಾಳ್ಯಾ ಮಾಡಿದ್ರ ಸಹಿತ ನಿಮ್ಮ ದುಶ್ಚಟದ ಪ್ರದರ್ಶನ ಹುಡುಗರ ಮುಂದ ಮಾಡಬಾರದು" ಅಂತ್ಹೇಳಿ ಅವರನ್ನ ಝಾಡಿಸಿ ಬಿಟ್ಟಿದ್ದರು. ಪಾಪ ಜಾಧವ ಸsರು "ಸ್ವಾರಿ, ಸ್ವಾರಿ ರೆಪಾ" ಅನಕೋತ ಕಪ್ಪಿಟ್ಟ ಮುಖದಿಂದ ಶಿವಣ್ಣವರ ಕೈಯಿಂದ ಪಾರಾಗಿದ್ದರು. ಅವತ್ತಿಂತೊಟ್ಟು ಜಾಧವಸsರು ಶಾಲೆಯ ಆವರsಣದೊಳಗ ಎಂದೂ ಸಿಗರೇಟು ಸೇದಲಿಲ್ಲ. ಬಾಕೀ ವಿದ್ಯಾರ್ಥಿಗಳು ಹ್ಯಾಂಗ ಕಂಪೌಂಡಿನ ಹೊರಗೇ ಸೇದಿ ಬಾಯಿ ತೊಳಕೊಂಡು ಒಳಗ ಬರತಿದ್ದರೋ ಹಂಗೇ ಮಾಡಲಿಕ್ಕೆ ಹತ್ತಿದರು.

ಶಿವಣ್ಣ ಮಾಸ್ತರಿಗೆ ಹೆಡ್‌ಮಾಸ್ತರ ಕಿತ್ತೂರ ಗೋಪಾಳಾಚರದೂ ದರಕಾರ ಇದ್ದಿದ್ದಿಲ್ಲ. "ನೀವು ಹಿಂಗ ವಾರದಾಗ ಎರಡೆರಡು ದಿವ್ಸ ಸ್ರಾದ್ಧ, ಪಕ್ಷ, ಹಬ್ಬ, ಹುಣ್ವಿ ಅನಕೋತ ಲೇಟಾಗಿ ಬರಾಕ ಹತ್ತಿದರ ವಿದ್ಯಾರ್ಥಿಗಳ ಮ್ಯಾಲೆ ಏನು ಪರಿಣಾಮ ಆಕ್ಕೇತಿ ಗೊತ್ತೈತ್ಯಲ್ಲ. ನೀವು ಬ್ರಾಮಿನ ಇದ್ದರs ನಿಮ್ಮ ಬ್ರಾಮ್ಯಾನಿಕಲ್ ಕೆಲಸ ಎಲ್ಲಾ ಒಂದೀಟು ದೌಡ ಮುಗಸಬೇಕು" ಅಂತ ದಬಾಯಿಸತಿದ್ದರು.

ಪರಮೇಶಿ ಹಾದಿ ನೋಡಿಕೋತ ಕ್ಲಬ್ಬಿನ್ಯಾಗ ಕೂತಾಗ ಒಂದು ಅಳತೀ ನಮ್ಮ ಸ್ಕೂಲಿನ ದಿನಗಳು, ಶಿವಣ್ಣನವರ ತರಬೇತಿಯಲ್ಲಿ ಹೆಣಗಿದ ದಿನಗಳು ಒಂದೊಂದೇ ಒಂದೊಂದೇ ಸ್ಮೃತಿಪಟಲದಲ್ಲಿ ಹಾಯ ತೊಡಗಿದವು.

ಆಗಿನ ದಿವಸಕ್ಕೆ ಶಿವಣ್ಣ ಮಾಸ್ತರದು ನಿತ್ಯಅ ಒಂದೇ ದಿನಚರಿ. ಬೆಳಿಗ್ಗೆ ನಾಲ್ಕಕ್ಕೆದ್ದು ಮುಖ ಮರ್ಜನ ಮುಗಿಸಿ, ಒಂದರ್ಧ ಗಂಟೆಯ ವರೆಗೆ ಒಂದು ದೊಡ್ಡ ಚಕ್ರದ ರಾಟಿ ಇಟಗೊಂಡು ನೂಲು ತೆಗೀತಿದ್ದರು. ಆ ಮ್ಯಾಲ ಜಳಕ. ಜಳಕದಾಗ ಹಳ್ಳದಿಂದ ಆರಿಸಿ ತಂದ ಒಂದು ನುಣುಪು ಬೆಣಚುಗಲ್ಲಿನಿಂದ ಮೈ ಕೈಮಾರಿ ಬೆನ್ನು ಕಾಲು ಎದಿ ಎಲ್ಲಾನೂ ಪರಾಪರಾ ತಿಕ್ಕೋತಿದ್ದರು. ಆ ಮ್ಯಾಗ ಅರ್ಧತಾಸು ಶಿವಪೂಜೆ. ಶಿವಪೂಜೆ ನಡೆದಾಗ ಹಣತುಂಬ ಮೂರ ಬಟ್ಟ ವಿಭೂತಿ ಬಳಕೋತಿದ್ದರು. ವಿಭೂತಿ ಪೂರ್ತಿ ಹಣಿ ಅಗಲಕ್ಕ ಅಂದರ ಕಿವಿಯಿಂದ ಕಿವಿಯ ವರೆಗೆ ಚಾಚಿರುತ್ತಿತ್ತು.

ಶಿವಣ್ಣ ಮಾಸ್ತರ ಮನ್ಯಾಗ ಯಾವಾಗಲೂ ನಮ್ಮಂತಹ ನಾಲ್ಕಾರು ಜಾಣ ವಿದ್ಯಾರ್ಥಿಗಳು ಮಲಗಿರುತ್ತಿದ್ದರು ಅಭ್ಯಾಸಕ್ಕೆಂದು. ಪೂಜೆ ಮುಗಿಸಿದ ಕೂಡಲೇ ಮಾಸ್ತರು ಇವರನ್ನೆಲ್ಲ ಒದ್ದು ಎಬ್ಬಿಸಿ ಓದಲಿಕ್ಕೆ ಕೂಡಸತಿದ್ದರು. ಆದಸಹಿತ ಸುಮ್ಮನೇ ಒಮ್ಮೆಲೇ ಓದಲಿಕ್ಕೆ ಹಚ್ಚತಿದ್ದಿದ್ದಿಲ್ಲ. ಓದಿನಕಿಂತ ಮೊದಲ ಒಂದು ಹತ್ತು ನಿಮಿಷ ಗಾಂಧೀಜಿಯ "ವೈಷ್ಣವ ಜನತೋ ತೇನೇ ಕಹಿಯೇ" ಆಗಬೇಕು ಆಮ್ಯಾಲೆ "ರಘುಪತಿ ರಾಘವ ರಾಜಾರಾಮ"ನನ್ನು ಭಜಿಸಬೇಕು. ಆಮ್ಯಾಲೆ ಓದು.

ನಾನೂ ಪರಮೇಶಿನೂ ಕಡೀಸರೆ ಎಸ್.ಎಸ್.ಸಿ.ಗೆ ಕೂತಾಗ ಕೊನೆಯ ಮೂರು ತಿಂಗಳು ಇವರ ಮನೆಯಲ್ಲೇ ಮಲಗುತ್ತಿದ್ದೆವು. ಆವಾಗ ಬೆಳಗಿನ ಈ "ರಘುಪತಿ ರಾಘವ" ಭಜನೀ ವ್ಯಾಳ್ಯಾಕ್ಕ ನನ್ನ ಮನ ಸ್ಥಿತಿ ವಿಚಿತ್ರ ಆಗಿರುತ್ತಿತ್ತು. ಕಂದೀಲದ ಮಿಣಿ ಮಿಣಿ ಬೆಳಕು, ಧೂಪದ್ದೂ ಊದಬತ್ತಿದೂ ಹೊಗೆ. ಇತ್ಲಾಗ ಭಜನಿ ಅಲ್ಲ ಅತ್ಲಾಗ ಪ್ರಾರ್ಥನಾ ಅಲ್ಲ ಹಿಂತಾ ವಿಚಿತ್ರ ಧಾಟಿಯೊಳಗ ನಾವೆಲ್ಲ ಹುಡುಗರು ಗಂಟಲು ಹರಿಯೋ ಹಂಗ ಆ 'ರಘುಪತಿ'ಯನ್ನ ರೊಚ್ಚಿಗೆಬ್ಬಿಸುತ್ತಿದ್ದೆವು.

ಆ ದಿನಗಳಲ್ಲಿ ನನ್ನ ಭವಿಷ್ಯತ್ತಿನ ಬಗ್ಗೆ ಮನೆಯಲ್ಲಿ ದಿನಾಲೂ ಒಂದಿಲ್ಲೊಂದು ರಾದ್ಧಾಂತವೇ ನಡೆದಿರುತ್ತಿತ್ತು. ದಿನ ಬೆಳಗೂ ನಮ್ಮ ತೀರ್ಥರೂಪರು ಉಗ್ರನರಸಿಂಹನ ರೂಪಧಾರಣ ಮಾಡಿ "ಶೀನ್ಯಾ ......... ಇದS ಕಡೀಸರೆ ........ ಕಟ್ಟಕಡೀ ಸರೆ ......... ಆಗದೀSSಖರೇ ಅಂದ್ರೂS ಕಡೀ ಸರೇ ....... ಈ ಸರೆ ಏನಾರ ನಪಾಸ ಆದ ಅಂದ್ರSS ........ ಇಲ್ಲಾ ನೀ ಆರS ಇರಬೇಕು ....... ಇಲ್ಲಾ ನಾ ಅರ ಇರಬೇಕು" ಅಂತ ಅನಕೋತ ದೊಡ್ಡಾಟದ್ದು ಮೂರು ಹೆಜ್ಜೆ ಹಾಕತಿದ್ದರು. ತೀರ್ಥರೂಪರ ಮಂತ್ರಪುಷ್ಪ ಮುಗಿಯುತ್ತಿದ್ದಂತೆಯೇ ಪಾಪ! ನಮ್ಮ ಮಾತೋಶ್ರೀಯವರು ಕಣ್ಣಾಗ ಗಂಗಾ ಭಾರತೀ ತಂದುಕೊಂಡು "ಯಾಕ ಇಲ್ಲದ್ದSS ವಾಗತ್ಯದ ಮಾತಾಡತೀರಿ, ಪಾಸಾಗೋದು ಬಿಡೋದು ಏನು ಆ ಹುಡುಗನ ಕೈಯಾಗ ಆದ ಏನು?" ಎಂದು ಮುಳು ಮುಳು ಅಳಲಿಕ್ಕೆ ಸುರು ಮಾಡತಿದ್ದರು. ಆಶ್ಚರ್ಯ ಅಂದ್ರ ನಮ್ಮ ಅಶಿಕ್ಷಿತ ಮುಗ್ಧ ತಾಯಿಗೆ ಇದ್ದ ಕಾಮನ್ ಸೆನ್ಸು (Commonsence) ನಮ್ಮ ತಂದಿಗೆ ಇದ್ದಿದ್ದಿಲ್ಲ. ಅಂತೂ ಈ ಹಿನ್ನೆಲೆ ಇತ್ತಂತೋ ಏನೋ ಆವತ್ತಿನಿಂದ ಇವತ್ತಿನ ತನಕಾ ಎಲ್ಲೇ "ರಘುಪತಿ ರಾಘವನ" ಭಜನಿ ನಡೆದಿರಲಿ ನನಗ ಒಂದು ಹೇಳಲಾರದ ಅಮೂರ್ತ ಹೆದರಿಕೆ ಸುರು ಆಗ್ತದ, ಏನೋ ಒಂದು ಅನಿರ್ವಚನೀಯ ಸೂತಕೀ ವಾಸನಿ ಬರತSದ. ಆವಾಗ ನಾನು ಘಾಬರ್‍ಯಾಗಿ ಓಡಿ ಹೋಗಿ "ಹೇಮಮಾಲಿನೀದೋ" "ಶ್ರೀದೇವಿದೋ" "ರೇಖಾಂದೋ" ಫೋಟೋ ಕ್ಷಣ ಹೊತ್ತು ನೋಡಿ ಫೋಟೋಕ್ಕೆ ಕೈಮುಗಿದು ಮತ್ತೆ ಜೀವನೋನ್ಮುಖನಾಗುತ್ತೇನೆ.

ಇರಲಿ. ಈ ರೀತಿ ಭಜನಿಗಳಾದ ಮ್ಯಾಲೆ, ಅಥವಾ ಪ್ರಾರ್ಥನಾ ಆದ ಮ್ಯಾಲೆ ಸುಮಾರು ಮೂರುಗಂಟೆಗಳ ವರೆಗೆ ಬಿಟ್ಟೂ ಬಿಡದೇ ಅವ್ಯಾಹತವಾಗಿ

ಸಾಮೂಹಿಕ ಅಭ್ಯಾಸ. ಈ ಅಭ್ಯಾಸ ನಡೆದಾಗಲೆಲ್ಲ ಯಾರ ಯಾರನ್ನೋ ಕುರಿತು ಶಿವಣ್ಣ ಮಾಸ್ತರರದು ರನ್ನಿಂಗ್ ಕಾಮೆಂಟ್ರಿ ನಡೆದೇ ಇರುತ್ತಿತ್ತು.

"ಕ್ವಾಣನ್ಹಂಗ ಬೆಳದೀದಿSS ಇನ್ನೂ ಫ್ಯಾಕ್ಟರ್‍ಯ ಅಂದ್ರೆನು ....... ಪ್ರಾಡಕ್ಟ್ಯ ಅಂದ್ರೇನು ಗೊತ್ತಿಲ್ಲ?" ....... ಕತ್ತ್ಯಅಗೀದಿ ಸಾಲ್ವಂಟ ಅಂದ್ರೇನು ಸೊಲ್ಯೂಶನ್ ಅಂದ್ರೇನು ತಿಳ್ಯರಿಗಿಲ್ಲ? ....... "ಏ ಬಟ್ಟSS ಈ ಸರೆ ಫೇಲಾದಿ ಅಂದ್ರ ನಿಮ್ಮಪ್ಪ ನಿನ್ನ ತಲಿ ಬೋಳಿಸಿ ಮಂದಿ ಮನಿ ಘಂಟಿ ಬಡ್ಯಾಕ ಕುಂದರಸ್ತಾನ ತಿಳೀತಿಲ್ಲೊ?" (ಈ ಸ್ವಸ್ತಿವಾಚನ ಯಾರನ್ನು ಕುರಿತಾಗಿತ್ತೆಂದು ಹೇಳಬೇಕಾಗಿಲ್ಲ ತಾನೆ?") .......

...... "ಅಲಲಲSS ಗೌಡ್ರೆSS ನೀವು ತಗದದ್ದು ಹಿಂದುಸ್ತಾನದ ನಕಾಶೆ ನಿಮ್ಮ ಹಳ್ಳದ ಹೊಲದಾಗಿನ ಬಣವೀ ಗತೆ ಕಾಣತೈತ್ಯಲ್ಲರಿ SS ...... ಸಾಲೀ ಯಿದ್ಯಾ ನಿಮ್ಮಂತಹದವರಿಗೆ ಅಲ್ಲರೀSS ಧಣೇರ ....... ದಯಮಾಡಿ ನೀವು ದನಾ ಕಾಯಾಕ ಹೋಗರಿ" .... ಈ ರೀತಿ ಅವರ ಪಾಠಕ್ರಮ ಎಡೆಬಿಡದೇ ನಡೆದಿರುತ್ತಿತ್ತು.

ಒಮ್ಮೊಮ್ಮೆ ಮಾಸ್ತರು ನನ್ನ ಎರಡೂ ಕಿವಿ ತಿರುಚಿ "ಶೀನ್ಯಾ .... ನಾಚಿಗಿ ಬರತೈತಿಲ್ಲೊ? ದಡ್ಡ ಸೂಳೆಮಗನ ...... ಹಾರೂರಾವಾಗಿ ಸಂಸ್ಕೃತ ಬರೂದುಲ್ಲಾ ......" ಅಂತ ತಿವೀತಿದ್ದರು. ಆವಾಗಿನ ಮಾಸ್ತರಗಳದು ಒಂದು ವಿಚಿತ್ರ ಕಲ್ಪನಾನS ಇತ್ತು. ಏನಂದ್ರ ಹಾರೂರಿಗೆ ಬಾಕೀ ಏನ ಬರದಿದ್ದರೂ ನಡೀತಿತ್ತು. ಆದರ ಸಂಸ್ಕೃತದಾಗ ಮಾತ್ರ ಸಾಕಷ್ಟು ಪಾರಂಗತ್ಯ ಇರಲೇ ಬೇಕಾಗಿತ್ತು. ಈ ದೃಷ್ಟಿಯಿಂದ ಪರಮೇಶಿನSS ನನಕಿಂತ ದೈವಾನ ಅಂತ ನನಗ ಅನಸ್ತಿತ್ತು. ಯಾಕಂದ್ರ ಅವಗ ಯಾವದೇ ವಿಷಯದಾಗ ಏನೂ ಬರದಿದ್ರೂ ನಡೀತಿತ್ತು. ಆದರ ನನಗ ಮಾತ್ರ ಹಾರೂರಾವ ಆಗಿ ದಡ್ಡ ಸೂಳೇಮಗ ಆಗೋ ಅಧಿಕಾರನS ಇದ್ದಿದ್ದಿಲ್ಲ. ಅದೂ ಎಲ್ಲಾ ಬಿಟ್ಟು ಸಂಸ್ಕೃತದಾಗ! ಛೆ! ಅಬ್ರಹ್ಮಣ್ಯಂ.

ಈ ರೀತಿ ಪಾಠ ಪ್ರವಚನಗಳನ್ನು ಮುಗಿಸಿ, ಸುಮಾರು ಎಂಟು ಗಂಟೇಕ್ಕ ಈ ಸ್ಕಾಲರ್ ವಿದ್ಯಾರ್ಥಿಗಳನ್ನೆಲ್ಲ ಮನೆಗಟ್ಟಿ, ಆಮ್ಯಾಲೆ ಮಾಸ್ತರು ತಮ್ಮ ರೊಟ್ಟಿ ಪಲ್ಲೆ ತಾವು ಮಾಡಿಕೊಳ್ಳಲಿಕಕೆ ಹತ್ತತಿದ್ದರು. ಅದೇನೋ ಸ್ವಾವಲಂಬನದ ವ್ರತ ಹಿಡಿದಿದ್ದರಂತ. ಅದಕS ತಮ್ಮ ಎಲ್ಲಾ ಕೆಲಸ ತಾವೇ ಮಾಡಿಕೋತಿದ್ದರು. ಅದರಿಂದ ಮಂದಿಗೆ ಎಷ್ಟS ತ್ರಾಸ ಆದರೂ ಚಿಂತಿಲ್ಲ! ಶಿವಣ್ಣ ಮಾಸ್ತರ ಸ್ವಾವಲಂಬನದ ಕಥಿ ಕೇಳಿದ್ರ ಯಾರಿಗಾದರೂ ಮೈನಡುಕ ಬರಬಹುದು. ದಿನಾಲೂ ರಾಟಿಯಿಂದ ತಾವು ತೆಗೆದ ನೂಲನ್ನು ವರ್ಷಕ್ಕೊಮ್ಮೆ ನೇಕಾರ ಮನೀಗೆ ಕೊಟ್ಟು ತಮ್ಮ ಧೋತರ ಜುಬ್ಬಾಕ್ಕ ಬೇಕಾಗುವಷ್ಟು ಅರಿವೀ ನೇಯಿಸಿಕೊಂಡು ಬರುತ್ತಿದ್ದರು. ತಮ್ಮ ಧೋತರ ತಾವು ಒಗದು ಮಡೀ ಮಾಡಿ ಇಟಗೋತಿದ್ದರು. ಆಮ್ಯಾಲೆ ತಮ್ಮ ರೊಟ್ಟಿ ಚಟ್ನಿ ತಾವ ಮಾಡಿಕೊಂಡು ಅದನ್ನ ತಾವೇ ತಿಂದು, (ಬ್ಯಾರೆ ಯಾವ ಸೂಳೆ ಮಗಗ ಅದನ್ನ ತಿನ್ನಲಿಕ್ಕೆ ಬರತಿತ್ತು?) ಸಾಲಿಗೆ ಹೊರಡತಿದ್ದರು. ಸಾಲೀ ಡ್ರೆಸ್ ಆದರೂ ಎಂತಹದು? ಧೋತರ, ಜುಬ್ಬ. ಜುಬ್ಬಾದ ಎಡಗಡೆ ಎದೀ ಮ್ಯಾಲ ಒಂದು

ಪರಾತದಂತಹ ಕಿಸೆ (ಜೇಬು). ಅದರಾಗ ಒಂದು ಸಣ್ಣದೂ ಒಂದು ದೊಡ್ಡದೂ ಎರಡು ಡೈರಿ, ಒಂದೆರಡು ಪೆನ್ಸಿಲ್ಲಿನ ತುಂಡು, ಒಂದೆರಡು ತಮಗೆ ಯಾರಿಂದಲೋ ಬಂದ, ತಾವು ಇತರರಿಗೆ ಬರೆದ ಪೋಸ್ಟ ಕಾರ್ಡುಗಳು, ಇನ್ನೇನೇನೋ ಇಂತಹದೇ ಕೆಲಸಕ್ಕೇ ಬಾರದ ಕಾಗದದ ತುಂಡುಗಳು.

ಇವರು ಬರೆಯುತ್ತಿದ್ದ ಪೋಸ್ಟಕಾರ್ಡುಗಳಲ್ಲಿ ಹೆಚ್ಚಾಗಿ ಸಾರ್ವಜನಿಕ ಕುಂದುಕೊರತೆಗಳೇ ತುಂಬಿರುತ್ತಿದ್ದವು. "ಸುಣಗಾರ ಓಣಿಯ ಹತ್ತಿರ ಬೀದಿ ದೀಪ ಎಂಟು ದಿನಗಳಿಂದ ಉರಿಯುತ್ತಿಲ್ಲ" ....... ಬಾಳೀ ಕಾಯಿ ಓಣ್ಯಾಗ ನಾಕ ದಿನದಿಂದ ಗಟಾರ ಬಳದಿಲ್ಲ" ........ "ಹುಬ್ಬಳ್ಳಿ ಧಾರವಾಡ ಸಿಟಿ ಬಸ್ ವ್ಯಾಳ್ಯಾಕ್ಕ ಬಿಡೂದುಲ್ಲ" ........ "ನಗರಕರ ಓಣ್ಯಾಗ ನಳಽ ಬಂದಿಲ್ಲ" ....... "ರಾಯನ ಗೌಡರ ಓಣಿ ರಸ್ತೆ ರಿಪೇರಿ ಮಾಡಿಲ್ಲ" ...... ಇಂತಹ ಲೋಪಗಳನ್ನೆಲ್ಲ 'ಸಂಬಂಧಪಟ್ಟ ಅಧಿಕಾರಿಗಳ ಗಮನಕ್ಕೆ' ತರುತ್ತಿದ್ದರು. 'ಹಂತಾದ್ದಕ್ಕೆಲ್ಲ ಸಂಬಂಧಪಟ್ಟವರು ಯಾರೂ ಇರೂದಿಲ್ಲ .... ಸುಮ್ಮನೇ ತೆಲೀ ಕೆಡಿಸಿಕೋಬ್ಯಾಡ್ರೀ' ಅಂತ ಊರಾಗಿನ ಮಂದಿ ಎಷ್ಟೇ ಹೇಳಿದರೂ ಕೇಳತಿದ್ದಿಲ್ಲ. ಮತ್ತೂ ಬರದಽ ಬರೀತಿದ್ರು..... ಬರದೆ ಬರೀತಿದ್ರು.

ಒಮ್ಮೆ ವರ್ಧಾಕ್ಕ ತಮ್ಮ ಪಾದದ ಅಳತೀ ಕಳಿಸಿ ಅಲ್ಲಿಂದ 'ಅಹಿಂಸಾ ಚಪ್ಪಲಿ' ತರಿಸಿದರು. ಪರಮೇಶಿ ಸುಮ್ಮನ ಇರಬೇಕೋ ಬ್ಯಾಡೋ "ಮಾಸ್ತರಽಽ ಅಹಿಂಸಾ ಚಪ್ಪಲಿ ಅಂದ್ರ ಏನ್ರೀ? ಅವನ್ನಽ ಕಾದಿ (ಖಾದಿ) ಯಿಂದ ಮಾಡಿರತಾರ ಏನ್ರಿ" ಅಂತ ಹೇಳಿ ಶಿಖ್ಖಂಗ ಅಂದ್ರ ಸಿಕ್ಕ ಹಂಗ ಅಂದರ ತರಗಾ ಬರಗಾ ಹೊಡೆಸಿಕೊಂಡಿದ್ದ. ಹುಡುಗೂರನ ಹೊಡೀ ಬೇಕಾದರ, ಅವರನ ತಿರಚ ಬೇಕಾದ್ರ ಜಜ್ಜ ಬೇಕಾದ್ರ ಮಾಸ್ತರು ತಾವು ಅಹಿಂಸಾವಾದೀ ಅಂಬೋದನ್ನ ಮರೆತೇ ಬಿಟ್ಟಿರುತ್ತಿದ್ದರು. ಆವಾಗೆಲ್ಲ ನಮಗ ಇವರೂ ನಾಕ ಮಂದಿ ಬಾಕೀ ಮಾಸ್ತರ ಹಂಗ ಸ್ವಲ್ಪ ಹಿಂಸಾವಾದೀ ಇದ್ರನೆ ಛೊಲೋ ಅನಸತಿತ್ತು. ಇರಲಿ.

ಹೀಂಗ ಡ್ರೆಸ್ ಮಾಡಿಕೊಂಡು ಶಿವಣ್ಣ ಮಾಸ್ತರು ಸಾಲಿಗೆ ಬಂದು ಸಾಲಿ ಒಳಗ ಹುಡುಗರದೂ, ಇತರೇ ಮಾಸ್ತರರದೂ, ಹೆಡ್ಡ ಮಾಸ್ತರರದೂ ಜೀವ ತಿಂತಿದ್ದರು. ಸಾಲಿ ಮುಗದ ಮ್ಯಾಲೆ ಕೆಲವು ವಿದ್ಯಾರ್ಥಿಗಳಿಗೆ ಸ್ಪೆಶಲ್ ಕ್ಲಾಸು ಆಮ್ಯಾಲೆ ಒಂದು ಘಂಟೆ ಬೌದ್ಧಿಕ ಮತ್ತೊಮ್ಮೆ ವೈಷ್ಣವ ಜನತೋ 'ರಘುಪತಿ ರಾಘವ' ಎಲ್ಲ ಮುಗಿಸಿ ಸಂಜಿ ಏಳು ಗಂಟೇಕ್ಕ ಮನೀಗೆ ಬಂದು ಒಂದು ವಾಟೆ ಆಡಿನ ಹಾಲು ಕುಡದು ಬಾಜೂಕಿನ ಮನಿಗೆ ಅಂದ್ರ ದೇಸಾಯಿ ಗುಂಡಣ್ಣನ ಮನೀಗೆ ಹೊಗತಿದ್ದರು. ಅಲ್ಲೆ ಅವತ್ತಿನ ದಿನ ಪತ್ರಿಕೆಯಾದ "ಸಂಯುಕ್ತ ಕರ್ನಾಟಕ"ವನ್ನ ಒಂದಕ್ಷರ ಬಿಡಧಂಗ ಪುಟ್ಟಾಪೂರಾ ಓದಿ ತಗೀತಿದ್ದರು.

ಅಗದೀ ಎಲ್ಲಾ ..... ಅಂದ್ರಽಽ ಅಗದೀ ಎಲ್ಲಾ ........ ಒಂದ ಸಣ್ಣ ಅಕ್ಷರ ಸಹಿತ ಬಿಡತಿದ್ದಿಲ್ಲ. ಆಮ್ಯಾಲ ದೇಸಾಯಿ ಗುಂಡಣ್ಣನ ಸಂಗ್ತಿ ರಾಷ್ಟ್ರೀಯ

ಅಂತರ್ರಾಷ್ಟ್ರೀಯ ವಿದ್ಯಮಾನಗಳನ್ನು ??ರ್ಚಸಿ, ಮನೆಗೆ ಬಂದು ಇನ್ನೊಮ್ಮೆ ಒಂದು ಸಣ್ಣ ಜಳಕಾ ಹೊಡೆದು ಶಿವಪೂಜೆ ಮುಗಿಸಿ ಮುಂಜಾಲೀವ ಎರಡು ರೊಟ್ಟಿತಿಂದು ಮಕ್ಕೋತಿದ್ದರು. ಹಿಂಗಿತ್ತು ನಮ್ಮ 'ಗಾಂಧೀವಾದಿ, ಸ್ವಾವಲಂಬಿ' 'ಅಹಿಂಸಾ ಮೂರ್ತಿ' ಶಿವಣ್ಣ ಮಾಸ್ತರ ದಿನಚರಿ.

ಮಾಸ್ತರ ಲಗ್ನ ಯಾವಾಗ ಆಗಿತ್ತೋ ಗೊತ್ತಿಲ್ಲ. ಅದರ ಲಗ್ನ ಆಗಿ ಬಂದ ಹೊಸ ಹೆಂಡತಿಗೆ ಸಹಿತ "ನಿನ್ನ ಶೀರಿ ಕುಬಸಕ್ಕ ಬೇಕಾಗೋ ಅಷ್ಟು ನೀನೆ ನೂಲಬೇಕು......... ನಿನ್ನ ರೊಟ್ಟಿ ಪಲ್ಲೆ ನೀನ ಮಾಡಿಕೋಬೇಕು ......" ಇತ್ಯಾದಿ ಸ್ವಾವಲಂಬನದ ದೀಕ್ಷಾ ಕೊಟ್ಟರಂತ. ಮುಂದ ಆರS ತಿಂಗಳದಾಗ ಪಾಪ ಶಿವಣ್ಣ ಮಾಸ್ತರ ಹೇಣ್ತಿ ಸತ್ತಳಂತೆ! ಸಾಯದೇ ಏನು ಮಾಡ್ಯಾಳು? ಹಿಂತಾ ಮನಿಶಾನ್ನ ಕಟಿಗೊಂಡು ಆಕಿ ಆರ ತಿಂಗಳ ಸಂಸಾರ ಮಾಡಿದ್ದೂ ಹೆಚ್ಚS! ಅಂತೂ ಶಿವಣ್ಣ ಮಾಸ್ತರು ಆ ಒಂದು ಬಂಧನದಿಂದಲೂ ಮುಕ್ತರಾದರು.

ತಮ್ಮ ಪಾಲಿಗೆ ತಾವೊಬ್ಬರು ಗಾಂಧಿ ಆಗಿದ್ದರ ನಮ್ಮದೇನು ಹರಕತ್ತ ಇದ್ದಿದ್ದಿಲ್ಲ. ಆದರ ಅವರ ವಿದ್ಯಾರ್ಥಿಗಳಾದ ನಮ್ಮನ್ನೆಲ್ಲ ಗಾಂಧಿನ್ನ ಮಾಡತೇನಿ ಅನ್ನುವ ಅವರ ಹಟ ಮಾತ್ರ ನಮ್ಮ ಜೀವದ ಸುತ್ತ ಬರತಿತ್ತು. ಪ್ರಜಾರಾಜ್ಯೋತ್ಸವದಂದು ಪ್ರಭಾತ ಫೇರಿ. ಗಾಂಧಿ ಹುತಾತ್ಮರಾದ ದಿವಸ ಮುಂಜಾನೆ ಹತ್ತು ಗಂಟೆಯಿಂದ ಹತ್ತ ಹತ್ರ ಮಿನೀಟಿಗೊಮ್ಮೆ ಗಡಿಯಾರ ನೋಡಿ ಕಡೀತ ಹನ್ನೊಂದು ಗಂಟೇಕ್ಕ ಒಂದು ಮಿನೀಟು ಮೌನ ಆಚರಿಸೋದು. ಅಗಷ್ಟ ಒಂಭತ್ತು ಕ್ರಾಂತಿ ದಿನ, ಭಗತ್‌ಸಿಂಗ ದಿನಾಚರಣೆ, ನೇತಾಜಿ ಹುಟ್ಟುಹಬ್ಬ ...... ವಿವೇಕಾನಂದರು ..... ಅಹಿಂಸಾ ....... ಆಡಿನ ಹಾಲು ....... ಜೇನುತುಪ್ಪ ........ ಸಾತ್ವಿಕ ಅಹಾರ ........ ತಮೋಗುಣ ತ್ಯಜಿಸುವುದು ..... ಬ್ರಹ್ಮಚರ್ಯ ......... ಸದಾಚಾರ ......... ಸಾದಾಜೀವನ ....... ತಿಂಗಳಿಗೆರಡ ಸರೆ ಮಶಿನ್ ಕಟ್ ಹಚ್ಚಿ ತಲೀ ಬೋಳಿಸಿಕೊಳ್ಳೋದು ..... ತಣ್ಣೀರ ಸ್ನಾನ ......... ಒಂದSS ಎರಡSS ರಾಮರಾಮಾ ಒಂದಿನಾS ಏನ ಸುಮ್ಮನ ನಮ್ಮಷ್ಟಕ್ಕ ನಮ್ಮನ್ನ ಬಿಡತಿದ್ದಿಲ್ಲ. ಅದೂ ಸ್ವಾತಂತ್ರ್ಯ ಬಂದ ಮೇಲೆ ಇದನ್ನೆಲ್ಲ ಮಾಡೋದ ಅಂದ್ರ ಅನ್ಯಾಯ ಅಲ್ಲ?

ಈ ಎಲ್ಲ ಚಟುವಟಿಕೆಗಳಿಂದ ಶಿವಣ್ಣ ಮಾಸ್ತರ ಏನೋ ಧಾರವಾಡದ ಗಾಂಧಿ ಅಂತ ಪ್ರಸಿದ್ಧರಾಗಿದ್ದರು. ಸ್ಥಾನೀಯ ಪತ್ರಿಕೆಗಳಾದ "ಗರ್ನಾಲು" "ಧಡಲ್‌ಬಾಜಿ" "ಹೋರಾಟ" "ಹಾರ್‍ಯಾಟ" ಮೊದಲಾದ ಪತ್ರಿಕೆಗಳಲ್ಲಿ ಶಿವಣ್ಣಾವರ್‍ನ ಧಾರವಾಡದ ಗಾಂಧೀ ಅಂತSS ಕರೀತಿದ್ದರು. ಆದರ ಇವರ ದುರ್ದೈವೀ ವಿದ್ಯಾರ್ಥಿಗಳಾದ ನಾವು ಮಾತ್ರ "ದೇವ್ರSS", ಮುಂದಿನ ಜನ್ಮಕ್ಕರSS ನಮಗ ಈ ತಲೆತಿರುಕ ಗಾಂಧಿ ಕೈಯಾಗ ಸಾಲೀ ಕಲಿಯೋ ಹಂತ ದೌರ್ಭಾಗ ತರಬ್ಯಾಡ ........ ಇಲ್ಲಾ ಲಗೂನ ಒಬ್ಬಾಂವ "ಧಾರವಾಡದ ಗೋಡಸೇ"ನ್ನ ಹುಟ್ಟಿಸು ಅಂತ ಆ ಪರಮಾತ್ಮನಲ್ಲಿ ಬೇಡಿಕೊಂಡಿದ್ದಿದೆ.

ಶಿವಣ್ಣ ಮಾಸ್ತರಿಗಂತೂ ಹೇಣ್ತಿ ಸತ್ತು ಅವರು ಮರುಮದುವೆಯಾಗದೇ ಸನ್ಯಾಸಿಗಳಾದರು ಅಷ್ಟೇ ಅಲ್ಲ, ಅವರು ಅದೇನೋ ನೈಷ್ಠಿಕ ಬ್ರಹ್ಮಚರ್ಯ ಪಾಲನೆಯಲ್ಲೂ ತೊಡಗಿದ್ದರಂತೆ. (ಹಂಗಂದ್ರ ಏನ ತಲೀನೋ ಅವರಿಗೇ ಗೊತ್ತು!) ಹಾಳಾಗಿ ಹೋಗಲಿ ಅಂದ್ರ ಅವರು ನಮ್ಮೆಲ್ಲರ ಬ್ರಹ್ಮಚರ್ಯವನ್ನು ಅಷ್ಟೇ ಕಟ್ಟು ನಿಟ್ಟಾಗಿ ಪಾಲಿಸುತ್ತಿದ್ದರು. ಹದಿನೈದು ಹದಿನಾರರ ಹರೆಯದ ಸಾಲೀ ಹುಡುಗುರು ನಾವು. ನಮಗ ಅದೆಲ್ಲ ಏನು ತಿಳೀಬೇಕರಿ? ಓಽಂಗ್ಹಿಂಗ ಅಂತ ತಿಳಿಸಿ ಹೇಳೋ ಹಾಂಗಿಲ್ಲ. ಹೇಳಿದ್ರ ಎಲ್ಲಿ ಕೆಟ್ಟು ಹೋಗ್ತಾರೋ ಅನ್ನುವ ಭಯ; ಹೇಳದಿದ್ರ ಎಲ್ಲಿ ಹಾಳಾಗಿ ಹೋದಾರೋ ಅನ್ನುವ ಹೆದರಿಕೆ ಅಂತೂ "ಹೆಣ್ಣು" "ಸೌಂದರ್ಯ" "ಮಿಲನ" "ಪ್ರೇಮ" "ಪ್ರೀತಿ" ಇತ್ಯಾದಿ ಏ! ಅಂತೂ ಜೀವನದಿಂದಽನಽ ವರ್ಜ್ಯ ಮಾಡಿಬಿಟ್ಟಿದ್ದರು ಮಾಸ್ತರು. ಸಿನೇಮಾದಾಗ ಎಷ್ಟೋ ಅಷ್ಟೇ!

ಹಿಂತಾ ದುಷ್ಕಾಳದಾಗ ಒಮ್ಮೆ ಕುಲಕರ್ಣಿ ಹಣಿಮ್ಯಾನ ಅಲ್ಜಿಬ್ರಾ ಪುಸ್ತಕದಾಗ, ಆಗಿನ ಕಾಲದ ಶ್ರೇಷ್ಠ ನಟಿ 'ಸುರೈಯ್ಯಾ'ನ ಫೋಟೋ ಸಿಕ್ಕಿ ಬಿಟ್ಟಿತು ಮಾಸ್ತರ ಕೈಯಾಗ. ಮಾಸ್ತರು ಕೋಪದಲ್ಲಿ ಕೆಂಡಾಮಂಡಲವಾಗಿ ಸುರೈಯಾನ ಚಿತ್ರವನ್ನು ಹರಿದು ತುಂಡು ತುಂಡು ಮಾಡುತ್ತ " ಈಟುದ್ದೀದಿ ಸಿನೆಮಾ ಸ್ಟಾರ್ ಫೋಟೋ ಇಡಾಕ ಹತ್ತೀಯಾ ..... ಹೆಣ್ಣಿನ ಫೋಟೋ ....... ಹೆಂಗಸಿನ ಫೋಟೋ ಬೇಕಾಗಾಕ ಚಾಲೂ ಆತ್ಯ ......" ಅನಕೋತ ಹಣಿಮ್ಯಾನ ಹೊಡೆದದ್ದೇ ಹೊಡೆದದ್ದು. ಹೊಡೆದದ್ದೇ ಹೊಡೆದದ್ದು. "ಯಾರ ಹೇಳ ಕೇಳವರಿಲ್ಲ ....... ಹಾರೂರಾವ ........ ಹಾರೂರಾವ ಆಗಿ ತುರುಕರ ಹೆಣ್ಣಿನ ಫೋಟೋ ಇಡಾಕ ಹತ್ತೀ ......." ಎಂದು ಮತ್ತೆ ಮತ್ತೆ ಹೊಡೆದರು. ಪಾಪ ಹಣಿಮ್ಯಾ ಅರಽ ಎಷ್ಟೊಂದು ಹೊಡಿಸಿಕೊಂಡಾನು? ಒಂದು ಲಿಮಿಟ್ಟ ಆದ ಮ್ಯಾಲ ತಿರಗಿ ನಿಂತು ಮೋತಿ ಉಬ್ಬಿಸಿ ಅತಗೋತ "ಫೋಟೋ ಇಟಗೋ ಬೇಕಾರ ಸಹಿತ, ಗೋತ್ರ ಬಿಡತಽದೇನು, ಜಾತಕದಾಗ ಎಷ್ಟು ಗುಣ ಕೊಡತಾವಽ ಎಲ್ಲ ನೋಡಬೇಕೇನ್ರಿ ಮಾಸ್ತರ್ ......." ಎಂದು ತಿರುಗಿ ಬಿದ್ದಿದ್ದ. ಹಂಗಾಗಿ ಈ ಪ್ರಕರಣ ಇಷ್ಟಕ್ಕೆ ನಿಲ್ಲದೇ ಹೆಡ್ ಮಾಸ್ತರಿಗೆ ರಿಪೋರ್ಟ ಆಗಿ ಅಲ್ಲಿಂದ ಹಣಿಮ್ಯಾನ ಅಪ್ಪಗ ತಿಳದು ಮುಂದ ಮೂರು ದಿವ್ಸ ಹಣಿಮ್ಯಾ ಇತ್ಲಾಗ ಶಿವಣ್ಣ ಮಾಸ್ತರು, ಹೆಡ್‌ಮಾಸ್ತರು ಅತ್ಲಾಗ ಅವರ ಅಪ್ಪ ಈ ಮೂವರೂ ರಾಕ್ಷಸರ ಕೈಯಿಂದ ಹೊಡೆಸಿ ಕೊಂಡದ್ದಽಽ ಹೊಡಿಸಿಕೊಂಡದ್ದು. ಇದಾಗಿ ನಾಲ್ಕು ದಿನಕ್ಕ ಒಂದು ದಿವ್ಸ ಸಾಲ ಬಿಟ್ಟು ಸಂಜೆ ಮನೀಗೆ ಹೋಗೋ ಮುಂದ, ಜವಳೀ ಪ್ಯಾಟೀ ಕಟ್ಟಿಗೆ ಅಡ್ಡೆದ ಗೋಡೆಗೆ ಹಚ್ಚಿದ "ಪ್ಯಾರಕೀ ಜೀತ್" ದ ಪೋಸ್ಟರ ನ್ಯಾಗಿನ ಸುರೈಯ್ಯಾನ ನೋಡಿಕೋತ ಹಣಿಮ್ಯಾ ನಿಂತ ಬಿಟ್ಟ. ಎಷ್ಟೋ ಹೊತ್ತು ಭಾವಪರವಶನಾಗಿ ಸುರೈಯ್ಯಾನ ನಿಟ್ಟಿಸಿದ ಮ್ಯಾಲೆ "ಶೀನೂ ನೋಡತಿರು ಈ ಸೋಳೆಮಕ್ಕಳು ಬೇಕಾದಷ್ಟು ಹೊಡೀಲಿ. ಧೊಡ್ಡಾಂವಾದಿಂದ ಸುರೈಯ್ಯಾನ್ನಽಽ ಲಗ್ನ ಮಾಡಿಕೋತೇನಿ" ಅಂತ ಹೇಳಿ ಮುಳುಗುತ್ತಿರುವ ಸೂರ್ಯನನ್ನ ಸಾಕ್ಷಿಯಾಗಿಟ್ಟುಕೊಂಡು ಪ್ರತಿಜ್ಞಾ ಮಾಡಿದ್ದ!

ಮುಂದೆ ಹಣಿಮ್ಯಾ ಏನು ಮಾಡಿದನೋ ತಿಳೀಲಿಲ್ಲ!!

ಶಿವಣ್ಣ ಮಾಸ್ತರ ರುಕ್ಷತೆಯದು ಇನ್ನೊಂದು ಘಟನೆ ನೆನಪಾಗ್ತದ. ಒಮ್ಮೆ ಧಾರವಾಡದ ವಿಜಯಾ ಟಾಕೀಸಿನ್ಯಾಗ "ಸತ್ಯಹರಿಶ್ಚಂದ್ರ" ಕನ್ನಡ ಸಿನೇಮಾ ಬಂದಿತ್ತು. ಗಾಂಧೀ ಸಣ್ಣವಿದ್ದಾಗ ಹರಿಶ್ಚಂದ್ರ ಸಿನೇಮಾ ನೋಡಿದ್ದನಂತೆ. ಅಂದ ಮ್ಯಾಲ ಬಿಟ್ಟಾರs? ಮಾಸ್ತರು ಕಡ್ಡಾಯವಾಗಿ ನಮ್ಮೆನ್ನೆಲ್ಲ ಸಿನೇಮಾಕ್ಕ ಅಟ್ಟಿದ್ದರು. ಸಿನೇಮಾದಾಗ ಹೊನ್ನಪ್ಪ ಭಾಗವತರ್ ಮತ್ತು ಲಕ್ಷ್ಮೀಬಾಯಿ ಹರಿಶ್ಚಂದ್ರ ತಾರಾಮತಿ ಆಗಿದ್ದರು. ಇಬ್ಬರೂ ಮೈಕೈ ತುಂಬಿಕೊಂಡು ಮುದ್ದಿ ಮುದ್ದಿಯಾಗಿ ಛಂದಾಗಿ ಅವಳಿ ಜವಳೀ ಕಂಡಂಗ ಕಾಣತಿದ್ದರು. ಮತ್ತ ಇಬ್ಬರೂ ಸಿನೇಮಾದ ತುಂಬ "ಹೊಂಯ್" ಅಂತ ಮಾತ ಮಾತಿಗೆ ಅಳತಿದ್ದರು. ಮರುದಿವ್ಸ ಕ್ಲಾಸಿನ್ಯಾಗ ಮಾಸ್ತರು ಅಗಸಾಲರ ಅಂತ್ಯಾನ್ನ ಕರದು "ಹರಿಶ್ಚಂದ್ರ ಸಿನೇಮಾದಾಗ ಏನ ನೋಡಿದೆಪಾ ಅನಂತಾ?" ಅಂತ ಕೇಳಿದರು. ಅಂತ್ಯಾ ಚಡ್ಡೀ ಜಗ್ಗಿಕೋತ "ತಾರಾಮತಿ ಭಾಳ ಛಂದ ಕಾಣತಿದ್ದಳು" ಅಂದ. ಇದನ್ನ ಕೇಳಿ ಮಾಸ್ತರು ಇದ್ದಕ್ಕಿದ್ದಂತೆ ತಮ್ಮ ಮುಕ್ಕಣ್ಣು ತೆಗೆದು ಅಂತ್ಯಾಗ ಎಲ್ಲೆಂದರಲ್ಲಿ ಹೊಡಕೋತ, "ಹೌದs ನನ ಮಗನss ಇಡೀ ಸಿನೆಮಾದ ತುಂಬ ಬರೇ ತಾರಾಮತಿ ಛಂದsನs ಕಾಣಸ್ತೇನ ನಿನಗ? ....... ಅದನ್ನ ನೋಡಾಕ ಹೋಗಿದ್ದೇನ?" ಅನಕೋತ ಹೊಡದದ್ದs ಹೊಡದದ್ದು. ತಮ್ಮ ಕೈ ಸೋತ ಮ್ಯಾಲೆ ಅಂತ್ಯಾನ್ನ ಬಿಟ್ಟು ನನ್ನ ಕಡೆ ಹೊರಳಿ "ಶೀನೂ ನೀ ಹೇಳು ನೀ ಏನ ನೋಡಿದಿ?" ಎಂದರು. ಅಂತ್ಯಾ ಹೊಡೆಸಿಕೊಂಡದ್ದಕ್ಕೂ, ಮತ್ತು ಮಾಸ್ತರ ದನಿಯಲ್ಲಿನ ಒಂದು ತರಹದ deceptive ಮಾರ್ದವಕ್ಕೂ ಹೆದರಿ ಕನ್‌ಫೂಸ ಆಗಿ ನಡಿಗಿಕೋತ ನಾನು "ಹರಿಶ್ಚಂದ್ರನೂ ಛಂದ ಕಾಣತಿದ್ದನರಿ" ಎಂದೆ. ಈ ಸಲ ಮಾತ್ರ ಮಾಸ್ತರು ಹತಾಶರಾಗಿ ಕ್ರುದ್ಧರಾಗಿ ತಮಗೆ ತಾವೇ ಕಪ್ಪಕಪಾಳ ಹೊಡಕೋತ ನಡುನಡುವೆ "ನನ್ನ ಖರ್ಮ .......ನನ್ನ ಖರ್ಮ ....... ನೀವೇನು ಮಾಡೀರಿsss ..... ಸತ್ಯಹರಿಶ್ಚಂದ್ರ ಸಿನೆಮಾದಾಗ ನಿಮಗ್ಯಾರಿಗೂ ಹರಿಶ್ಚಂದ್ರನ ಸತ್ಯಪ್ರೇಮ, ನಿಷ್ಠೆ, ಶ್ರದ್ಧಾ ಇವ್ಯಾವೂ ಕಾಣಲಿಲ್ಲ. ಬರೇ ಆಕೀ ಛಂದ ಅದಾಳ ಇಕೀ ಛಂದ ಅದಾಳ .........ಇದನ ನೋಡಾಕ ಸಿನೇಮಾಕ್ಕ ಹೋಗಿದ್ರೇನ" ........... ಅನಕೋತ ಹೊಡಕೊಂಡss ಹೊಡಕೊಂಡು, ಹೊಡಕೊಂಡss ಹೊಡಕೊಂಡ್ರು.

ನಾವೇನು ಮಾಡಬೇಕು? ಆ ವಯಸ್ಸಿಗೆ ಸತ್ಯದ ಕೂಡ ಸ್ವಲ್ಪ ಸೌಂದರ್ಯದ್ದೂ ಸಾಕ್ಷಾತ್ಕಾರ ಆಗತೇನೆಂದ್ರ ಮಾಸ್ತರ ಯಾಕ ಹೊಡಕೋ ಬೇಕೋ ತಿಳೀಲಿಲ್ಲ!

ಮಾಸ್ತರು ಕಡಕ್ ಇದ್ದರು ಅಂದರ ಅವರಿಗೆ ಅಂತಃಕರಣs ಇದ್ದಿದ್ದಿಲ್ಲ ಬರೇ ದೂರ್ವಾಸಮುನಿ ಹಂಗ ರಾಕ್ಷಸರಿದ್ದರು ಅಂತಲ್ಲ. ನಿಜವಾಗಿ ಅವರ ಅಂತರಂಗದಾಗ ಅವರ ವಿದ್ಯಾರ್ಥಿಗಳ ಬಗ್ಗೆ ಮಾತೃಸಹಜವಾದ ವಾತ್ಸಲ್ಯದ ನಿರಂತರ ಧಾರೆ ಪ್ರವಹಿಸುತ್ತಿತ್ತು. ರಜೆ ದಿನಗಳಲ್ಲಿ ನಮ್ಮನ್ನೆಲ್ಲ ಕರಕೊಂಡು

ಕ್ಯಾಂಪಿಗೆ, ಟ್ರೆಕ್ಕಿಂಗಿಗೆ ಹೋಗೋದು, ಬಡ ವಿದ್ಯಾರ್ಥಿಗಳಿಗೆ ಸ್ವಂತ ದುಡ್ಡು ಕೊಟ್ಟು ಕಲಸೋದು. ಬೇನೆ ಬೇಸರಕಿ ಬಂದವರ ಆರೈಕೆ ಮಾಡೂದು ........ ಒಂದSS ಎರಡSSS. ಒಮ್ಮೆ ನನಗ ಕಟ್ಟಿನ ಜ್ವರ ಬಂದಾಗ ಮೂರು ದಿವ್ಸ ನನ್ನ ಹಾಸಿಗೆ ಪಕ್ಕದ ಸ್ಟೂಲ ಮ್ಯಾಲSಕೂತಿದ್ದರು.

ಇಷ್ಟೆಲ್ಲ ಏವಂಗುಣ ವಿಶಿಷ್ಟಗಳಿಂದ ಕೂಡಿದ ಶಿವಣ್ಣ ಮಾಸ್ತರಿಗೆ ಬರೇ ಮಾಸ್ತರ ಅಂದ್ರ ಮನಸ್ಸಿಗೆ ಸಮಾಧಾನ ಆಗತಿದ್ದಿಲ್ಲ. ಅವರಿಗೆ ಮಾಸ್ತರಾಧಿಪ, ಮಾಸ್ತರೇಶ್ವರ, ಮಾಸ್ತರೊಂಕಾ ಬಾದಶಾ, ಲೆಕ್ಕದ ಮಾಸ್ತರ ಪುಚ್ಚ ಕಿತ್ತಿಪ, ಹೆಡ್‌ಮಾಸ್ತರ ರುಂಡ ಚೆಂಡಾಡಿಪ, ಮಾಸ್ತರ ಕುಲತಿಲಕ ಗುರು ಭಯಂಕರ, ಉಡಾಳರ ಕಡು ದುಃಸ್ವಪ್ನ, ಮಡ್ಡ ಮರ್ದಿಪ, ಹೆಡ್ಡರ ಜಡ್ಡೋಡಿಪ ....... ಭೋ ....... ಭೋ ..... ಶಿವಣ್ಣ ಮಾಸ್ತರ್‍ರ್ ....... ಭೋ ಪರಾಕ್ ಇತ್ಯಾದಿ ಪರಾಕು ಹೇಳಬೇಕೆನಿಸುತ್ತದೆ. ಯಾಕಂದ್ರ, ಮಾಸ್ತರ may come and ಮಾಸ್ತರ, may go; But ಅಂತಃಸಾಕ್ಷಿಯ ದ್ವಾರಪಾಲರಾಗಿ ನಾವು ಅಷ್ಟಿಷ್ಟು ಸಣ್ಣಪುಟ್ಟ ಶೆಗಣಿ ತಿನ್ನೋ ಕೆಲಸ ಮಾಡಿದಾಗೆಲ್ಲ ನಮ್ಮ ಕಿವಿಪಟಲ ಹರಿದು ಹೋಗುವಂತೆ ಢಾಂ ........ ಢಾಂ ........ ಎಂದು ನಮ್ಮ ಅಂತರಂಗದ ಜಹಾಂಗೀರ ಗಂಟೆಯನ್ನು ಎಳೆಯುತ್ತಲೇ ಬಂದಿದ್ದಾರೆ. ಹೀಗಾಗಿ ಕಳೆದ ಮುವತ್ತು ನಾಲವತ್ತು ವರುಷಗಳಲ್ಲಿ ಅವರ ವಿದ್ಯಾರ್ಥಿಗಳಾಗಿದ್ದು ಇಂದಿನ ಗೌರವಾನ್ವಿತ ನಾಗರಿಕರೆನಿಸಿಕೊಂಡವರಿಗೆಲ್ಲರಿಗೂ ಶಿವಣ್ಣ ಮಾಸ್ತರು ಒಂದು ಶ್ರದ್ಧಾಸ್ಥಾನವಾಗಿದ್ದರು.

ವಾಗಿದ್ದರು ಅಂದರ ಇನ್ನೂ ಹಂತಾದ್ದೇನುವಾಗಿಲ್ಲ. ಇನ್ನೂವಾಗಿದ್ದಾರೆ. ಆದರೂ ಪಾಪ, ಹಿಂಗಾಗಬಾರದಾಗಿತ್ತು. ಮೊದಲೇನೋ ನಾಲ್ಕೈದು ಸಲ ಹೀಂಗಾದಾಗ ತಡಕೊಂಡಾರ ಅವಾಗ ಇನ್ನೂ ಸಣ್ಣ ವಯಸ್ಸು ತಡಕೊಂಡರು ಈಗ ಮದಲಿನ್ಹಂಗ ವಯಸ್ಸಿಲ್ಲ. ಆದರೂ ಜಗತ್ತು, ಸಮಾಜ ಸುಧಾರಸ್ತೇನಿ, ಅನ್ಯಾಯ ಸರಿಪಡಿಸಿಯೇ ತೀರತೇನಿ ಅನ್ನೋ ಹಟ ಹೋಗಿಲ್ಲ.

ನನ್ನ ತಂದ್ರಿ ಇದೇ ರೀತಿ ಸಾಗಿದ್ದಾಗ ಪರಮೇಶಿ ಬಂದ. ಮುಖದ ಮೇಲೆ ಗಾಬರಿ ಬೇಸರ ಎಲ್ಲ ತುಂಬಿತ್ತು. ಸ್ವಲ್ಪ ದಣಿವಾರಿಸಿಕೊಂಡು ನಡೆದದ್ದನ್ನು ಹೇಳತೊಡಗಿದ;

"ಏನ ಹೇಳೋದSS ಇವರದ ಗೊತ್ತS ಆಯಿತೆಲ್ಲ, ಹೋದಲ್ಲಿ ಬಂದಲ್ಲಿ ಹಟ ಝಗಳSS ....." ಎಂದು ಪೀಠಿಕೆ ಹಾಕಿ ಮುಂದೊರೆಸಿದ. ನಿನ್ನೆ ಸಂಜಿಕ ಬಂದ್ವಿ 'ಪುಡಕಲಕಟ್ಟಿ – ಬೆಂಗಳೂರ' ಪ್ಯಾಸೆಂಜರ ಬಸ್ಸಿಗೆ. ಬಸ್ಸಿನ್ಯಾಗ ಕಂಡಕ್ಟರನ ಸಂಗತಿ ಮಾಸ್ತರದು ಝಗಳSನ ಝಗಳ "ಇಷ್ಟು ಮುಂದಿನ್ನ ತುಂಬಿ ಓವ್ಹರ್‌ಲೋಡ ಯಾಕ ಮಾಡ್ತಿ?" "ಟಾಪ್‌ದ ಮ್ಯಾಗ ಮುಂದಿನ್ನ ಯಾಕ ಕುಂದರಸತೀ"? "ಪ್ಯಾಸೆಂಜರು ಬಸ್ಸಿನ್ಯಾಗ ಬೀಡೀ ಸಿಗರೇಟ ಸೇದತಾರು" ಒಂದSS ಎರಡSS ........ ಬಸ್ಸಿನ್ಯಾಗಿನ ಮಂದೆಲ್ಲ ಮಾಸ್ತರಿಗೆ ಹೇಳೇ ಹೇಳಿದರು.

ಹಿಂತಾದರಾಗಯಲ್ಲಾ ಕಂಡಕ್ಟರ ಏನ ಮಾಡತಾನು ಪಾಪ! ನೀವsS ಒಂದೀಟ ಅಡ್ಜಷ್ಟ ಮಾಡಿಕೋರಿ ಅಂತ. ಆದರ ಕೇಳಬೇಕಲ್ಲ ಇವರುS ಕಿರಿಕಿರಿ ...... ಕಡಿತನಾ ಕಿರಿಕಿರಿ ಮಾಡಿಕೋತನS ಬೆಂಗಳೂರ ಮುಟ್ಟಿದೆವ್ರು.

ರಾತ್ರಿ ನಮ್ಮ ತಮ್ಮನ ಮನ್ಯಾಗ 'ವಸ್ತಿ' ಹಾಕಿದೆವ್ರು. ರಾತ್ರಿ ಮಾಸ್ತರು ಊಟಾ ಮಾಡ್ಲಿಲ್ಲ. "ಇವತ್ತ ಸ್ವಾಮಾರ ಒಪ್ಪತ್ತು. ಆಡಿನಹಾಲು ಸಿಗತಾವೇ ನೋಡು" ಎಂದರು. ಅಲ್ಲೆ ಬಾಜೂಕಿನ ಮನೀ ಔಟಹೌಸದಾಗ ಒಬ್ಬಾಂವ ತುರುಕರಾವ ಅದಾನ. ಹಿಂದಕ ಎರಡು ಮೂರು ಸರೆ ಬಂದಾಗ ಅವನS ಆಡಿನ ಹಾಲು ಕೊಟ್ಟಿದ್ದ. ಅಂವನ್ನS ಹೋಗಿ ಕೇಳಿದಿವಿ 'ಹಾಲು ಕೊಡಪಾ' ಅಂತ. ನಿನ್ನಿನ್ನೂ ಬಕರೀದ ಹಬ್ಬ ಆಗೇತಿ ಆಡS ಇಲ್ಲS. ಹಾಲ ಎಲ್ಲಿಂದ ತರಲಿ?" ಎಂದ ಸಾಬ. ಹಗಲೂ ಪ್ರವಾಸದಾಗೂ ಮಾಸ್ತರು ಏನೂ ತೊಗೊಂಡಿದ್ದಿಲ್ಲ. ಹಿಂಗಾಗಿ ಉಪವಾಸ ಮಲಗಿದರು ಪಾಪ.

ಇವತ್ತ ಮುಂಭೂಲೆ ಸಹಿತ 'ಬಿಸಿಲೇರುದ್ರಾಗ ಕೆಲಸ ಮುಗಿಸಿಕೊಂಡು ಬಂದು ಬಿಡೋಣು, ಆಮ್ಯಾಲೆ ಝುಳಕಾ ಊಟಾ ಮುಗಿಸಿ ಯಿಸ್ರಾಂತಿ ತೊಗೊಂಡು ಸಂಜಿ ಬಸ್ಸಿಗೆ ಹೊರಡೋಣ' ಅಂದ್ರು, ಆಗಲಿ ಅಂದೆ. ಹೊರಗ ಬಿದ್ದಿವಿ.

ತೊಗೋಳಪಾ! ಮದಲsS ಶಿವಣ್ಣ ಮಾಸ್ತರು. ಅದರಮ್ಯಾಗ ಉಪಾಸ ಹಿಂಗಾಗಿ ಹೋದಲ್ಲಿ ಬಂದಲ್ಲಿ, ಕುಂತಲ್ಲಿ ನಿಂತಲ್ಲಿ ಝುಗಳನ್ನS ಝುಗಳಾ. ರಸ್ತೇದ ಮ್ಯಾಗ ಪೇಪರ್ ಮಾರಾವನ ಹಂತ್ಯಾಕ 'ಪೇಪರ ಮಡಿಚೇತಿಯಾಕ? ಬಸ್ಸಿನ ಕಂಡಕ್ಟರನ ಹಂತ್ಯಾಕ 'ನೀ ಚಿಲ್ಲರೆ ಕೊಡೂದುಲ್ಲ ಯಾಕ?' 'ನಮ್ಮ ಸಮಾಜ ಎತ್ತಾಗ ಹೊಂಟೈತಿ'? 'ಮಂದಿ ಇಷ್ಟ ಅನ್ಯಾಯ ತಡಕೊಂತಾರ ಯಾಕ'? 'ನಮ್ಮ ದೇಶದ ಚಾರಿತ್ರ ನಾಷ್ಟಾ ಆಗಾಕ ಹತ್ತೇತಿ' ಜನರೊಳಗೆ ನಿಯತ್ತಂಬೋದsS ಉಳದಿಲ್ಲ!ನಮ್ಮ ನಾಡು ಅದೋಘತಿಗಿಳಿಯಾಕ್ಹತ್ತೇತಿ' ಬರೇ ಹಿಂಗsS ಛೀ ...... ಛೀ ...... ಛೀ ..... ಮುಂಜಾಲಿಂದ ತಲೀ ಕೆಟ್ಟಹೋತ ನಂದು.

ಬ್ಯಾಂಕಿನಾಗ ಹೋದರ ಅಲ್ಲಿ ತಂಟೆ, ಎಲ್.ಆಯ್.ಸಿ ಆಫೀಸಿನಾಗ ಹೋದ್ರ ಅಲ್ಲಿ ಒದರ್ಯಾಟ. ನಾ ಒಂದಳತೀ ಬಡಕೊಳ್ಳತ ಹತ್ತಿದ್ದಿನಿ "ಮಾಸ್ತರS ದಿವ್ಸ ಕಾಲ ಛೊಲೋ ಇಲ್ಲ. ಬ್ಯಾಂಕು, ಎಲ್.ಆಯ್ಸಿ. ಅಂತಹಾ ಆಫೀಸಿನ್ಯಾಗ ನಾವS ಅವರ ಕೆಲಸS ಮಾಡಿಸಿಕೋ ಬೇಕಾಗತತಿ, ಹೀಂಗ ಒದರ್ಯಾಡಿದ್ರ ಹೇಂಗ?" ಅಂತ ಬೇಕಾದಷ್ಟು ಹೇಳಿದೆ, ಶಿವಣ್ಣ ಮಾಸ್ತರು ಜಗ್ಗವರS?

ಅಂತೂ ಕಡೀಕ ಮಧ್ಯಾಣ ಹನ್ನೆರಡ ಗಂಟೇಕ್ಕ ಕ್ಯಾಂಟೋನಮೆಂಟದಾಗ ಶಿವಾಜಿನಗರ ಮುಟ್ಟಿದೆವ್ರು. ಅಲ್ಲೇ ನೋಡು ಗಾತ ಆದದ್ದು. ಅಲ್ಲೆಲ್ಲೋ ಪೆರಿಯಾರ್ ಸ್ಟ್ರೀಟನ್ಯಾಗ "ಮುರುಗನ್ ಸ್ಟೋರ್ಸ"ದಾಗ ಹೋದಸರೆ ಬಂದಾಗ ಒಂದು ಮಿಕ್ಸಿ ರಿಪೇರಿಗೆ ಕೊಟ್ಟಿದ್ದರಂತ, ಅದೂ ಇವರದಲ್ಲ. ಊರಾಗಿನ ಇವರ ಸ್ನೇಹಿತರದ ಯಾರದೋ. ಅಂಗಡಿಯಾವ ತಮಿಳಿನ್ಯಾಗ 'ಇನ್ನೂ ರಿಪೇರಿಯಾಗಿಲ್ಲ

ಇನ್ನ ಯಂಟ ದಿವ್ಸಾ ಬೇಕು' ಅಂತ ಏನೋ ಹೇಳಾಖತ್ತಿದ್ದ. ಇವರು 'ನೀ ಏನ ಹೇಳತೀ ತಿಳ್ಯಂಗಿಲ್ಲ ಖನ್ನಡದಾಗ ಮಾತಾಡು' ಅಂದ್ರು. ಅವ 'ಬರೂದುಲ್ಲ' ಅಂದ. ಇವರು ಪಟಕ್ಕ ಬಿದ್ದು ಕರ್ನಾಟಕದ ರಾಜಧಾನಿ ಬೆಂಗಳೂರಾಗ ನೀ ಖನಡ ಮಾತಾಡದಿದ್ರ ಹ್ಯಾಂಗ? ಅಂದ್ರು. ಅವ ಏನೋ ಅಂದ. ಇವರು ಏನೋ ಅಂದ್ರು. ಆಜೂಬಾಜೂದ 'ಷಣ್ಮುಗ ಸ್ಟೋರ್ಸ್' 'ಕಾಮರಾಜ ಡೀಪೋ' ದಿಂದ ಮಂದಿ ಬಂದ್ರು. ಮಾತಿಗೆ ಮಾತ ಬೆಳೀತು. ನೋಡಪಾ ಹಾ–ಹಾ– ಅನ್ನೋದರಾಗ ಮಂದಿ ಕೂಡಿ ಮಾಸ್ತರನ್ನ ಬಡಿಯಾಕ ಹತ್ತಿದರು. ಛತ್ರೀ, ಸಾಯಕಲ್ ಚೇನು, ಏನ ಸಿಗತೈತಿ ಅದರಿಂದ ಹೊಡದರು. ಮಾಸ್ತರದ ತಲೀ ಒಡದೈತಿ. ಎಡಗೈ ಮುರದೈತಿ. ಅಂತೂ ಹಾಂಗೂ ಹೀಂಗೂ ಒದ್ದಾಡಿಕೋತ ಹಾಸ್ಪಿಟಲ್ ಸೇರಸಬೇಕಾರ ಸಾಕ ಬೇಕಾಗಿ ಹೋತು.

ಇದನ್ನೆಲ್ಲ ಕೇಳಿ ನನ್ನ ಮೈನಡುಗಲಾರಂಭಿಸಿತು. ನಾನು ಕೋಪದಲ್ಲಿ, ಅಸಹನೆಯಲ್ಲಿ ಕೇಳಿದೆ, "ಅಲ್ಲೋ ಪರಮೇಶಿ, ಇಷ್ಟೆಲ್ಲ ಮಾರಮಾರಿ ನಡೆದಾಗ ಅಲ್ಲೆ ಕನ್ನಡ ಮಂದೀನs ಇದ್ದಿದ್ದಿಲ್ಲ ಏನು? ಅವರೇನು ಮಾಡಲಿಲ್ಲೇನು" ಎಂದೆ "ಯಾಕ ಇದ್ದಿದ್ದಿಲ್ಲ" ಅಂದ ಪರಮೇಶಿ, ಸಾಕಷ್ಟು ಖನಡ ಮಂದಿ ಕೂಡಿತಲ್ಲ ಒಮ್ಮಿಗೀಲೆ, ಅವರಿಗೇನು ಅಂತಃಕರಣ ಇಲ್ಲ? ಅಭಿಮಾನ ಇಲ್ಲ? ಎಲ್ಲಾರೂ ಕೂಡಿ ಮಾಸ್ತರನ್ನ ಬಾಜೂಕ ಎಳೆದು ಅವರಿಗೆ ಬೇಕಾದಷ್ಟು ತಿಳಿ ಹೇಳಿದರು.

"ಇಪ್ಪಡಿ ಪಂಡ್ರದು ಸರಿಯಿಲ್ಲೈ. ಪಾವಂ ಅವರಿಕ್ಕು ಕನ್ನಡಂ ಪೇಸರದಿಕ್ಕ ವರಲೈಯಿನ್ನಾ ಅವರೆನ್ನ ಪಣ್ಣಣ್ಣುಂ? ನೀಂಗೆ ಕೊಂಜ adjust ಪಣ್ಣಿಕ್ಕಣುಂ" ಅಂತ ಚಾಲವರದರು ಪಾಪ! ಕಡೀಕ ಖನಡ ಮಂದೀನ್ನ ಕೂಡಿ ಹಾಸ್ಪಿಟಲ್‌ಗ ಹಾಕಾಕ ಸಹಾಯ ಮಾಡಿದ್ರಲ್ಲ" ಎಂದ ಪರಮೇಶಿ. ಕ್ಷಣಬಿಟ್ಟು ಅವನೇ ಮುಂದುವರೆಸಿದ "ಪುಣ್ಯಾತ ಡಾಕ್ಟರು ಲಗೂನ ಬಂದು ಹೊಲಿಗೀ ಹಾಕಿ, ಪಟ್ಟೀ ಕಟ್ಟಿ, ನಿದ್ದೀ ಇಂಜಕ್ಷನ್ ಚುಚ್ಚಿ ಮಲಗಿಸಿದ್ದರs. ಎಚ್ಚರ ಆಗಾಣ ನಿನ್ನ ಕೇಳಾರ ಹತ್ಯಾನ ನಡೀ" ಎಂದ.

* * *

ದಾರಿಯಲ್ಲೆಲ್ಲ ನನಗೆ ಮಾಸ್ತರದೇ ಯೋಚನೆ. ಈ ಮನಿಶ್ಯಾ ಹಿಂಗ್ಯಾಕ ಮಾಡತಿದ್ದಾರು, ತಮ್ಮಿಂದ ಮಂದಿಗೆ ಎಷ್ಟು ತೊಂದರೆ, ಅನನುಕೂಲ ಸ್ವಲ್ಪರs ಯೋಚಿಸಬಾರದs? ಛೆ, nuisance ಆಗ್ಯಾರ ನುಯಿಸನ್ನ್ಯ ......... ಇನ್ನ ಇಡೀ week - end ಎಲ್ಲಾ ಹಾಳು ...... ಎರಡು ಗುಟಕ ಸಹಿತ ಹೊಟ್ಯಾಗ ಹೋಗಿದ್ದಿಲ್ಲ ...... ಛೆ .. ದರಿದ್ರ ಮಾಸ್ತರು. ಅನಕೋತs ಹಾಸ್ಪಿಟಲ್ ಮುಟ್ಟಿದೆವು.

ಮಾಸ್ತರು ಎದ್ದು ಲೋಡಿಗಾತುಕೊಂಡು ಶೂನ್ಯವನ್ನು ನಿಟ್ಟಿಸುತ್ತ ಪಿಳಿ ಪಿಳಿ ಕಣ್ಣ ಬಿಟ್ಟಗೋತ ಕೂತಿದ್ದರು. ಹೋದಸರೆ ನೋಡಿದ್ದರಕಿಂತ ಒಮ್ಮೆಗಿಲೇ ಹೆಚ್ಚು

ಸೊರಗಿದವರಂತೆ ಕಂಡರು. ಕಣ್ಣಿನ ಸುತ್ತಲೂ ಕಪ್ಪು ಕಟ್ಟಿತ್ತು. ಮೂಗು ಎದ್ದು ಕಾಣುತ್ತಿತ್ತು. ಕೆನ್ನೆ ತುಂಬ ಬರೇ ಎಲಬುಽ ಕಾಣತಿದ್ದವು. ತಲೀಗೆಽಽ ಕೈಗೆ ಬ್ಯಾಂಡೇಜ ಹಾಕಿದ್ದರು. ಮಾಸ್ತರು ತೀರ ಏಕಾಂಗಿಯಾಗಿ ಕಾಣ ತೊಡಗಿದ್ದರು. ಇಷ್ಟಾದರೂ ಅಂತರಂಗದಾಗಿನ ಸ್ಥೈರ್ಯ, ಹಟ ಹೋಗಿದ್ದಿಲ್ಲ, ಕಣ್ಣಾಗಿನ ಕಾಂತಿ ಕುಂದಿದಿಲ್ಲ. ನಿರ್ವಿಣ್ಣ ದುರ್ಬಲ ಮುಖದ ಮೇಲೆ ಅನೇಕ ಕಾಳಗಗಳ ವೀರ ಯೋಧನ ಕಳೆ ಇತ್ತು.

ಅವರನ್ನ ನೋಡಿ ಜೀವನದ ಬಗ್ಗೆ ನನ್ನಲ್ಲಿರುವ ಶಿನಿಕತೆ, ವ್ಯವಸ್ಥೆಯ ಬಗೆಗಿನ ಅವಿಶ್ವಾಸ,ನಿಷ್ಠೆಯ ಅಭಾವ ಎಲ್ಲ ಇದ್ದಕ್ಕಿದ್ದಂತೆ ಮಾಯವಾಗಿ ಏನೋ ಒಂದು ಗೌರವ ಬರಲಾರಂಭಿಸಿತು. ಎಲ್ಲಕ್ಕಿಂತ ಹೆಚ್ಚಾಗಿ ಬಾಲ್ಯದಿಂದಲೂ ನಮ್ಮನ್ನು ಒಂದು ಸ್ಥಿತಿಗೆ ತರಲು ಹೆಣಗಿದ ಈ ಹಿರಿಯ ಬಂಧುವಿನ ಈ ಸ್ಥಿತಿಗೆ ಅಪಾರ ಕರುಣೆ ಉಕ್ಕಿ ಬಂದು, ಕಣ್ಣಲ್ಲಿ ಚಿಮ್ಮುತ್ತಿದ್ದ ಹನಿ ಅಶ್ರುವನ್ನೂ ಗಂಟಲಲ್ಲಿ ನುಗ್ಗಿ ಬರುತ್ತಿದ್ದ ಬಿಕ್ಕನ್ನು ತಡೆಯುತ್ತಾ "ಏನ್ರೀ ಮಾಸ್ತರಽಽ ನಿಮಗೆ ಯಾರ ಹೇಳವರು ಕೇಳವರು ಇಲ್ಲಂತ ತಿಳದೀರೇನು ..... ಜಗತ್ತೂ ಸಮಾಜ ಎಲ್ಲ ಹಾಳಾಗಿ ಹೋಗಲಿ ...... ಸ್ವಲ್ಪ ನಿಮ್ಮಷ್ಟಕ್ಕ ನೀವು ಆರಾಮ ಇರಲಿಕ್ಕೆ ಕಲೀರಿ ..... ನೀವು ಹಿಂಗ ಮಾಡಿದರ ನಾವೆಲ್ಲ ಎಲ್ಲಿ ಹೋಗಬೇಕು .... ಇನ್ನರಽ ಸ್ವಲ್ಪ ಬದುಕಲಿಕ್ಕೆ ಕಲೀರಿ" ಎಂದೆ.



"ವೀರಪ್ಪನ್ ಹಿಡಿಯೋ ಗುಂಪಿಗೆ ಓಗ್ತಿದೀರಾ ಬುದ್ಧೀ??"

*With Best Compliments From:*




*With Best Compliments From:*

**M/S. K.L.M. PRECISION ENGINEERS**

M.S. Ramaiah Industrial Estate
Gokula, Bangalore - 560 054

# ಸಮಾಧಾನ

ಎಚ್. ಡುಂಡಿರಾಜ್

ಈಗೀಗ ಯಾಕೊ
ಬರೆಯಲಾಗುತ್ತಿಲ್ಲ ಕವಿತೆ
ಬುದ್ಧಿಗೆ ಮಂಕು ಕವಿಯಿತೆ?
ಸ್ಫೂರ್ತಿಯ ಸೆಲೆ ಬತ್ತಿತೆ?
ಪ್ರಾಸ, ಛಂದಸ್ಸು, ಮಾತ್ರೆ, ಲಯ
ರಮ್ಯ, ನವ್ಯ ಬಂಡಾಯ
ಕಲಿತದ್ದೆಲ್ಲ ಘಟ್ಟ ಹತ್ತಿತೆ?

ಮಹಾಕವಿಗಳೊಬ್ಬರು
ಸಂದರ್ಶನದಲ್ಲಿ ಹೇಳಿದ್ದಾರೆ
ಇದ್ದಕ್ಕಿದ್ದಂತೆ
ಧುಮ್ಮಿಕ್ಕಿ ಹರಿವುದಂತೆ
ಅವರ ಕಾವ್ಯ ಧಾರೆ
ಒಂದು ವಾರ ಕೂತು
ಸರಸರೆ ಬರೆದವರಂತೆ
ಭರ್ತಿ ಐವತ್ತು ಕವಿತೆ!
ಭಲೆ ಭಲೆ
ಮಹಾಕವಿಗಳೆ
ಬೊಕ್ಕ ತಲೆಯಲ್ಲೂ
ಎಂಥಾ ಬಂಪರ್ ಬೆಳೆ!

2

ಮುನಿಕಂಡರೆ ಮುನಿ
ಮುನಿವಂ ಎಂಬಂತೆ
ಮಹಾಕವಿಗಳ ಬಗ್ಗೆ ಅಸೂಯೆಪಟ್ಟು
ಪಟ್ಟು ಹಿಡಿದು ಕುಂತೆ
ಕಾವ್ಯ ತಪಸ್ಸಿಗೆ, ಮರೆತು
ಬೇರೆಲ್ಲ ಚಿಂತೆ
ಮಂತುಗಳ ಮೇಲೆ ಮಂತು ಸಂದು
ವರ್ಷ ಮುಗಿದು ವಸಂತ ಬಂದರೂ
ಬರೆಯಲಾಗಲಿಲ್ಲ
ಒಂದೇ ಒಂದು ಸಾಲು
ಛೇ ಎಂಥ ಸೋಲು!
ಎಲಾ ಅವನ!
ಹೇಗೆ ಬರೆದಿರಬಹುದು
ಆ ಮಹಾಕವಿಗಳು
ದಿಢೀರ್ ಕವನ?
ನೋಡೇ ಬಿಡೋಣ
ಎಂದು ಅವರ ಸಂಕಲನ
ತಂದು ಓದಿದೆ ನಿಧಾನ

ಅಂಥ ಒಂದೇ ಒಂದು ಕವನ
ನಾನು ಬರೆಯಲಿಲ್ಲ
ಕೊನೆಗೂ ಬರೆಯಲಿಲ್ಲ
ಸದ್ಯ ಬರೆಯಲಿಲ್ಲ!
ಅದೇ ಸಮಾಧಾನ

# ಕನ್ನಡ ವ್ಯಾಕ – ರಣ

ಪ್ರಕಾಶ್

ಸ್ಕೂಲು ಜೀವನ ಬಿಟ್ಟು ಇಷ್ಟು ವರ್ಷಗಳಾದರೂ ಕನ್ನಡ ವ್ಯಾಕರಣ ಅಂದರೆ ಬೆಚ್ಚಿ ಬೀಳುವ ಹಾಗಾಗುತ್ತೆ ನನಗೆ. ಆ ಕನ್ನಡ ಮೇಷ್ಟರು ಬಹು ಸಿಸ್ಟಂ, ಶಿಸ್ತು! ನನಗೋ ವ್ಯಾಕರಣದ ಗಂಧ ಬಹು ಕಷ್ಟವಾಗಿತ್ತು ಅರಗಿಸಿಕೊಳ್ಳಕ್ಕೆ. ಹ್ಯಾಗೋ ಕನ್ನಡ ಪಾಸಾಯಿತು ಅನ್ನಿ!

ಮೊನ್ನೆ ಹಳೇ ಪುಸ್ತಕಗಳನ್ನು ಉಗ್ರಾಣದ ಮೂಲೇಲಿ ನೋಡ್ತಾ ಕೂತಿದ್ದೆ. ನನ್ನ ಸ್ಕೂಲ್ ವ್ಯಾಕರಣದ ಪುಸ್ತಕ ಕಣ್ಣಿಗೆ ಬಿತ್ತು. ಕುತೂಹಲದಿಂದ (ಈಗ ಭಯ ಇಲ್ವಲ್ಲ!) ಪುಟ ತಿರುಗಿಸುಕ್ಕೆ ಶುರು ಮಾಡಿದೆ. ಅತ್ಯಾಶ್ಚರ್ಯ! ಆ ಜನ್ಮದಲ್ಲಿ ಅಷ್ಟು ಭಯಾನಕವಾಗಿ ಕಂಡ ಪುಸ್ತಕದಲ್ಲಿ ತಿಳಿ ಹಾಸ್ಯದ ಹೊನಲು ತುಂಬಿ ಹರೀತಿತ್ತು! ಆ ಆನಂದಾನುಭವಾನ ನಿಮಗೂ ಸ್ವಲ್ಪ ಹಂಚ್ತೀನಿ, ಕೂತ್ಕೊಂಡು ಓದಿ!

ಅನುನಾಸಿಕಗಳೆಂದರೇನು? ವ್ಯಾಕರಣ ಓದಬೇಕಾಗಿಲ್ಲ ಇವನ್ನ ಅರಿಯುಕ್ಕೆ! ಯಾವ ಅಮೆರಿಕನ್ ಮಾತಾಡೋದು ಕೇಳಿದರೂ ಸಾಕು! ಅವರೇಕೆ ಹೀಗೆ ಅಂತ ಅಭ್ಯಾಸ ಮಾಡುಕ್ಕೆ ಟ್ರಾನ್ಸಕಲ್ಚರಲ್ ವ್ಯಾಕರಣ ಸ್ಟಡೀ ಮಾಡಬೇಕು! ಒಂದು ಪಿ.ಎಚ್.ಡೀನೂ ಗಿಟ್ಟಿಸಬಹುದು!

'ಲಂಚವನ್ನು ಕೊಡು!' ಇದು ಲೋಪ ಸಂಧಿಯ ಉದಾಹರಣೆ. 'ಲಂಚವು + ಅನ್ನು' ಎಂಬುದರ 'ಉ'ಕಾರ ಲಂಚವನ್ನು ಅಂದಾಗ ಲೋಪವಾಗುತ್ತದೆ. ಇದೇ ಕ್ಷಣದಲ್ಲಿ ಸರ್ಕಾರದ ನಿಯಮಾವಳಿಗಳೂ ಲೋಪವಾಗುತ್ತವೆ ಎಂಬುದು ಇಲ್ಲಿ ಬಹು ಪ್ರಸ್ತುತ!

ಯಕಾರಾಗಮ ಸಂಧಿ ಅಂದರೆ ನೆನಪು ಇದೆಯೆ ನಿಮಗೆ? ಉದಾ: "ಅಧಿಕಾರಿ ಕಚೇರಿಯಿಂದ ನಗುತ್ತ ಹೊರಬಂದನು" (ಲಂಚ ಕಂಠಪೂರ್ತಿ ತಿಂದ ಮೇಲೆ ನಗದೆ ಇನ್ನೇನು?) ಕಚೇರಿ + ಇಂದ = ಕಚೇರಿಯಿಂದ ಅಂತ ಬೇರೆ ಹೇಳಬೇಕಾಗಿಲ್ಲ! ಆ ಅಧಿಕಾರಿಗೂ ಈ ಸಂಧಿಯ ಜ್ಞಾನ ಇರಬೇಕಾಗಿಲ್ಲ!

ವಕಾರಾಗಮ ಸಂಧಿ ಇನ್ನೂ ಚೆನ್ನಾಗಿದೆ. "ಮಂತ್ರಿಗಳು ನಾವು ಮಾಡುವ (ಮಾಡ್ + ಉ + ಅ) ಕೆಲಸ ದೇವರ ಕೆಲಸ ಅಂದರು" ಈ ತರಹ ಹೇಳಿಕೆ ಕೇಳಿ ಹಿಂದಿಯ 'ವಕಾರ್' (ವಾಂತಿ) ಬಂದರೆ ಆಶ್ಚರ್ಯವಿಲ್ಲ!

ನಿಕಟ ಸಂಧಿ; ವಿರಳ ಸಂಧಿ! ಈ ಸ್ಥಿತಿಗಳು ಹಾಲೀ ಕರ್ನಾಟಕದ ಸರ್ಕಾರಕ್ಕೆ ಬಹು ಚೆನ್ನಾಗಿ ಅನ್ವಯಿಸುತ್ತವೆ.

ನಿಕಟ ಸಂಧಿ:- ಮಂತ್ರಿವರ್ಯರೆಲ್ಲರೂ ಒಂದುಗೂಡಿ ಸಮಾಲೋಚಿಸಿದರು.

ವಿರಳ ಸಂಧಿ:- ಭಿನ್ನರು ಸರ್ಕಾರವನ್ನು ಉರುಳಿಸಲು ಪಣ ತೊಟ್ಟರು.

ಇನ್ನು ಸ್ವಲ್ಪ ಹೈಯರ್ ವ್ಯಾಕರಣಕ್ಕೆ ಸಾಗೋಣ. ಸಮಾಸಗಳು ಬಹು ಕಾಂಪ್ಲಿಕೇಟೆಡ್. ಕರ್ಮಧಾರಯ ಸಮಾಸ ಅರ್ಥಮಾಡಿಕೊಳ್ಳೋದು ನಮ್ಮ ಕರ್ಮ ಅಂತ ಬಾಲ್ಯದಲ್ಲಿ ಗೋಳಾಡ್ತಾ ಇದ್ವಿ! ದ್ವಂದ್ವ ಸಮಾಸದಲ್ಲಿ ಎಲ್ಲ ಪದಗಳ ಅರ್ಥಗಳೂ ಮುಖ್ಯ.

ಉದಾ: ಶೇಷಣ್ಣನಿಗೆ ಕೇಂದ್ರ – ರಾಜ್ಯ ಸರ್ಕಾರಗಳೆರಡರ ಮೇಲೂ ಬಹು ವಿಶ್ವಾಸವಿದೆ.

ಇನ್ನೊಂದು ತಾಜಾ ಉದಾ: ನರಸಿಂಹನಿಗೆ ಕಾಲ – ವಿಳಂಬ ಮಾಡಲು ಬಹು ಉತ್ಸಾಹ!

ಬಹುವ್ರೀಹಿ ಸಮಾಸದ್ದೇ ಸ್ಪೆಷಲ್ ಸೊಗಸು. "ಯಾವ ಪದದ ಅರ್ಥವೂ ಮುಖ್ಯವಾಗಿರದೆ, ಪೂರ್ವ ಮತ್ತು ಉತ್ತರ ಪದಗಳೆರಡೂ ಬೇರೊಂದು ವಸ್ತುವನ್ನು ಸೂಚಿಸಿದರೆ, ಅದೇ ಬಹುವ್ರೀಹಿ ಸಮಾಸ" – ವ್ಯಾಕರಣ ತಜ್ಞರು.

ಉದಾ: ಕಪೋಲದಲ್ಲಿ ಕೇಶವುಳ್ಳವನು ಯಾವನೋ ಅವನು ಕಪೋಲ ಕೇಶಿ (ಎಂ.ಟಿ.ವಿ. ನೋಡಿದರೆ ಅರ್ಥವಾಗುತ್ತದೆ!)

"ಏನೋ ಒಂದಷ್ಟು ಕೊಡಿ ಸ್ವಾಮಿ! ಕೆಲಸ ಬೇಗಾಗುತ್ತೆ!" (ಏನೋ ಒಂದಷ್ಟು ಎಂಬುದು ಯಾವುದನ್ನು ಸೂಚಿಸುತ್ತವೆ ನಮ್ಮ ಓದುಗರಿಗೆ ಹೇಳಬೇಕಾಗಿಲ್ಲ!)

ಅಷ್ಟು ಹೊತ್ತಿಗೆ ನನ್ನ ಮಗ ರವಿ ಬಂದ. "ಇದೇನಣ್ಣ, ಈ ಧೂಳಿನಲ್ಲಿ ಆಟ ಆಡ್ತಾ ಇದೀಯ?" ಅಂದ. ಅವನಿಗೆ ಧೂಳಿನ ಅಲರ್ಜಿ! ಸೀನುಗಳ ಸುರಿಮಳೆ! ನನಗೆ ಒಳ್ಳೆಯ ಸಂದರ್ಭ! "ನೋಡು ಮರಿ, "ರವಿಯು ಪದೇ ಪದೇ ಸೀನಿದನು" ಈ ವಾಕ್ಯದಲ್ಲಿ ನಾಮಪದ, ದ್ವಿರುಕ್ತಿ, ಕ್ರಿಯಾಪದ ಎಲ್ಲ ಸರಿಯಾಗಿ ಬ್ಯಾಲೆನ್ಸ್ ಆಗಿದೆ". ಅಂದೆ. ರವಿಗೆ ರೇಗಿತು. ವ್ಯಾಕರಣದ ಪುಸ್ತಕವನ್ನು ಎತ್ತಿ ಬಿಸುಟ.

ವ್ಯಾಕರಣದ ಪುಸ್ತಕ ಹಕ್ಕಿಯಂತೆ ದೂರಕ್ಕೆ ಹಾರಿತು. ಈ ನಯನ ಮನೋಹರ ದೃಶ್ಯವನ್ನು ನೋಡುತ್ತ ನಾನು ತನ್ಮಯನಾದೆ!

# ಒಂದು ದೆವ್ವದ ಕಥೆ

ಶಿವು

ಅದೊಂದು ಖಾಲಿ ಮನೆ. ಆ ಮನೇಲಿ ವಾಸವಾಗಿದ್ದ ಮುದುಕ ತೀರಿಕೊಂಡ ಮೇಲೆ ಮನೇಲಿ ವಾಸಿಸೋರು ಯಾರೂ ಇಲ್ಲದೇ ಅದು ಖಾಲಿ ಬಿದ್ದಿತ್ತು. ಈ ಮಹಾನಗರಿಯಲ್ಲಿ ಒಂದು ಮನೆ ಎಷ್ಟು ದಿನ ಹೀಗೆ ಖಾಲಿಯಾಗೇ ಇರೋದಕ್ಕೆ ಸಾಧ್ಯ? ರೆಂಟ್ ಕಂಟ್ರೋಲ್ ಜನ ಏನು ಕಡ್ಲೇಪುರಿ ತಿಂತಾ ಇರ್ತಾರ್ಯೇ? ಸರಿ, ಮನೆ ಖಾಲಿ ಇದೆ, ಆರುನೂರು ರೂಪಾಯಿ ಬಾಡಿಗೆ ಅಂತ ಬಾಡಿಗೆ ನಿಯಂತ್ರಣದೋರು ಸ್ವಯಂ ಪ್ರಕಟಣೆ ಹೊರಡ್ಸೇ ಬಿಟ್ರು. ಒಬ್ಬ ಮಂತ್ರಿಗಳ ಅಳಿಯನಿಗೆ ಅದು ಅಲಾಟೂ ಆಗ್ಹೋಯ್ತು. ಮನೆ ಆಕ್ರಮಿಸಿ ಕೊಳ್ಳೋಕೆ ಮುಂಚೆ ಅದನ್ನ ಕ್ಲೀನ್ ಮಾಡಿಸೋಣ ಅಂತ ಅಳಿಯ, ಆಳನ್ನ ಕರೆದುಕೊಂಡು ಮನೆಗೆ ಹೋದ. ಮುಂದಿನ ಬಾಗಿಲು ತೆಗೆದು ಒಳಕ್ಕೆ ಹೋಗುತ್ಲೇ ಹಿಂದೆ ಬಾಗಿಲು ರಪ್ ಅಂತ ಮುಚ್ಚಿಕೊಂಡು ಬಿಡ್ತು. ಯಾರೊ ಹ್ಞ ಹ್ಞ ಹ್ಞಾ ಅಂತ ಗಹಗಹಿಸಿ ನಕ್ಕಿದ್ರು. ಮನೇಲಿ ಯಾರಾದ್ರೂ ಕಳ್ರು ಸೇರ್ಕೊಂಡಿದಾರೇನೋ ಅಂತ ಈ ಇಬ್ರು ಹೀರೋಗಳೂ ಮನೇನೆಲ್ಲಾ ಹುಡುಕಿದ್ರು. ಯಾರೂ ಸಿಕ್ಕಿಲ್ಲ. ಅಷ್ಟು ಹೊತ್ಗೆ ರೂಮಿನ ಮೂಲೇಲಿದ್ದ ಸ್ಟೂಲೊಂದು ಅನಾಮತ್ತಾಗಿ ಮೇಲೆದ್ದು ಗಾಳೀಲಿ ತೂರಾಡ್ತಾ ಇವರ ಹತ್ರಾನೇ ಬಂತು. ಅಳಿಯನ ತಲೇ ಮೇಲಕ್ಕೆ ಸರಿಯಾಗಿ ನಿಂತು ಠಪ್ ಅಂತ ತಲೇ ಮೇಲೆ ಕುಟ್ತು. ತಿರುಗಿ ಹ್ಞ ಹ್ಞ ಹ್ಞಾ ನಗು. ಇಬ್ರೂನೂ ಸತ್ವೋ, ಕೆಟ್ವೋ ಅಂತ ಕೂಗಿಕೊಂಡು ಮನೇ ಬಿಟ್ಟು ಓಡಿದ್ರು. ಅವತ್ತಿಂದ ಆಸುಪಾಸಿನ ಜನಾ ಎಲ್ಲಾ ಆ ಮನೇನ ದೆವ್ವದ ಮನೆ ಅಂತ ಕರೆಯಕ್ಕೆ ಶುರು ಮಾಡಿದ್ರು. ಇತ್ಲಾಗೆ,  ಅ ಓಡಿಹೋದ ಅಳಿಮಯ್ಯ ಹೆಂಡ್ತೀಗೆ ದೂರಿತ್ತ. ಹೆಂಡ್ತಿ, ತನ್ನ ತಂದೇಗೆ ಆದದ್ದನ್ನೆಲ್ಲಾ ಮಸಾಲೆ ಸೇರಿಸಿ ವರ್ಣಿಸಿ, ನಿಮ್ಮ ಮೂತಿ ನೋಡಿ, ದೆವ್ವದ ಮನೆ ಕೊಟ್ಟಿದಾರೆ ಆಫೀಸರು ಅಂತ ಹಂಗಿಸಿದಳು. ಅವರಮ್ಮನೂ ಮಗಳನ್ನು ವಹಿಸಿಕೊಂಡು ಮಂತ್ರಿಗಳ ಮುಖದ ನೀರಿಳಿಸಿದಳು. ಸಚಿವರು ಆಫೀಸರಿಗೆ, ಆಫೀಸರು ಕೇಸ್ ವರ್ಕರ್ ಕೆಂಪಯ್ಯನಿಗೆ ಈ ಬಯ್ಗುಳಾನೆಲ್ಲಾ ಚಾಚೂ ತಪ್ದೆ ರವಾನಿಸಿದ್ರು. ಕೆಂಪಯ್ಯ ಬಯ್ಗುಳಾನ ಯಾರಿಗೂ ರವಾನಿಸೋ ಹಾಗಿರಲಿಲ್ಲ. ಸದಾ ನುಂಗೀ, ನುಂಗೀ ಅಭ್ಯಾಸ ಇದ್ದದ್ರಿಂದ ಈ ಬಯ್ಗುಳಾನೂ ಗುಳುಂ ಅಂತ ನುಂಗಿ ಮುಂದಿನ ಕಾರ್ಯ ನೋಡಿದ.

ಮುಂದಿನ ಕಾರ್ಯಕ್ರಮ ಅಂದ್ರೆ, ದೆವ್ವದ ಉಚ್ಚಾಟನೆ. ಅದನ್ನ ಹ್ಯಾಗೆ ಮಾಡೋದು? ಹೀಗೇ ಯೋಚ್ನೆ ಮಾಡ್ತಾ ಇದ್ದಾಗ ನಾರ್ತ್‌ರೇಂಜ್ ಆಫೀಸಿನ ಕೇಸ್ ವರ್ಕರ್ ಶಿವಪ್ಪನ ಮಾವ ದೆವ್ವ ಬಿಡಿಸೋಸದ್ರಲ್ಲಿ ಗಟ್ಟಿಗ ಅಂತ ಯಾರೋ ಹೇಳಿದ್ದು ಜ್ಞಾಪಕಕ್ಕೆ ಬಂತು. ಕೆಂಪಯ್ಯ ಶಿವಪ್ಪನ ಹತ್ರ ಓಡಿದ. ಶಿವಪ್ಪ ಅವನನ್ನ ತನ್ನ ಮಾವನ ಹತ್ರ ಕರ್ಕೊಂಡು ಹೋದ. ಮಾವ ಹೇಳ್ದ: ನೋಡಿ ಕೆಂಪಣ್ನೋರೆ ದೆವ್ವಾನ ಮನೆ ಬಿಟ್ಟು ಓಡ್ಸೋದು ನನ್ನ ಕೈಲಾಗುಲ್ಲ. ಮನುಷ್ಯರ ಮೇಲೆ ದೆವ್ವಾನ ಆವಾಹನೆ ಮಾಡೋದು, ದೆವ್ವ ಹಿಡಿದಿದ್ದೋರಿಗೆ ದೆವ್ವ ಬಿಡಿಸೋದು ಇಷ್ಟು

ಮಾತ್ರ ನಾನು ಮಾಡಬಲ್ಲೆ ಅಂತ ನಿಸ್ಸಂಕೋಚವಾಗಿ ತನ್ನ ಶಕ್ತಿಗಿರೋ ಇತಿಮಿತಿನ ತಿಳಿಸ್ದ. ಕೆಂಪಯ್ಯ ಯೋಚಿಸ್ದ. ಮೊದಲು ಯಾರ್ಮೇಲಾದ್ರೂ ಈ ದೆವ್ವನ ಆವಾಹನೆ ಮಾಡಿಸ್ಬಿಟ್ರೆ, ಆಮೇಲೆ ಅದರೊಂದಿಗೆ ಸಾಮ, ದಾನ, ಭೇದ ಎಲ್ಲಾ ಪ್ರಯೋಗಿಸಿ, ಮಾತನಾಡಿ ಮನೆ ಬಿಡಿಸ್ಕೋಬಹುದು ಅನ್ನಿಸ್ತು. ಸರಿ, ಮಾವಯ್ಯ ದೆವ್ವಾನ ಯಾರಮೇಲಾದ್ರೂ ಆವಾಹನೆ ಮಾಡಿ ನಾನು ಅದರ ಹತ್ರ ಮಾತನಾಡಿ ಅದನ್ನ ಮನೆ ಬಿಡೋದಕ್ಕೆ ಒಪ್ಪಿಸ್ತೀನಿ ಅಂದ. ಆವಾಹನೆ ಯಾರ ಮೇಲೆ ಮಾಡ್ಲೀ? ಮಾಡಿಸ್ಕೊಳ್ಳೋರು ಸ್ವಂತ ಇಚ್ಚೆಯಿಂದ ಒಪ್ಪಿದ್ರೆ ಮಾತ್ರ ಆ ಕಾರ್ಯ ಸಾಧ್ಯ ಅಂದ ಮಾವಯ್ಯ. ಕೆಂಪಯ್ಯ ಶಿವಪ್ಪ ಕಡೆ ನೋಡ್ದ. ಬಹಳ ವರ್ಷಗಳ ಗೆಳೆತನ. ಶಿವಪ್ಪನಿಗೆ ಇಲ್ಲಾ ಅನ್ನುಕ್ಕೆ ಆಗಲಿಲ್ಲ. ಸರಿ, ಮೂರು ಜನಾನೂ ಮುಂದಿನ ಅಮಾವಾಸ್ಯೆ ರಾತ್ರಿ ದೆವ್ವದ ಮನೆಗೆ ಹೊರಟರು.

ಆ ರಾತ್ರಿ ದೆವ್ವ ತನ್ನ ಪಾಡಿಗೆ ತಾನು ಹಾಡು ಹೇಳಿಕೊಳ್ಳುತ್ತಾ ಆಗಾಗ, ಬಾಗಿಲು ಬಡಿಯುತ್ತಾ ಗಹಗಹಿಸಿ ನಗುತ್ತಾ ಆನಂದದಿಂದ ಇತ್ತು. ಈ ಮೂರು ಪ್ರಭೃತಿಗಳು ಹಠಾತ್ತನೆ ಮನೆ ಒಳಕ್ಕೆ ನುಗ್ಗಿದ್ದು ನೋಡಿ ದೆವ್ವಕ್ಕೆ ಸ್ವಲ್ಪ ಗಾಬರಿಯೇ ಆಯಿತು. ಇನ್ನೇನು, ಗಹಗಹಿಸಿ ನಕ್ಕು, ಬಾಗಿಲು ಬಡಿದು ಹೆದರಿಸಿ ಓಡಿಸೋಣ ಅಂದ್ಕೊತಿರುವಾಗ್ಲೇ, ಮಾವಯ್ಯ ನಾಲ್ಕು ಬಾರಿ ಹ್ರಾಂ ಹ್ರೀಂ ಅಂತ ಹೇಳಿ, ನಾಲ್ಕು ಗೋಡೆಗೂ ಅರಿಷ್ಣ, ಕುಂಕ್ಮ ಎರಚಿ ದೆವ್ವಕ್ಕೆ ದಿಗ್ಬಂಧನ ಹಾಕ್ಬಿಟ್ಟ. ಆಮೇಲೆ ಅದನ್ನ ಶಿವಪ್ಪನ ಮೇಲೆ ಆವಾಹನೆ ಮಾಡಿದ್ದೂ ಆಯ್ತು. ಕೆಂಪಯ್ಯ ದೆವ್ವಾನ ಕೇಳ್ದ, ದೆವ್ವ ಮಹಾಸ್ವಾಮಿ, ನೀವಿಲ್ಲಿರೋದ್ರಿಂದ ನನ್ನ ಕೆಲ್ಸ ಹೋಗೋದ್ರಲ್ಲಿದೆ. ದಯವಿಟ್ಟು ಮನೆ ಬಿಟ್ಟು ಹೋಗ್ತೀರಾ? ದೆವ್ವ ಹೇಳ್ತು – ನಾನ್ಯಾಕೆ ಹೋಗ್ಲಿ? ಬೇಕಾದ್ರೆ ನನ್ಮೇಲೆ ಕೇಸ್ ಹಾಕಿ, ನಿಮ್ಮ ಆಫೀಸಿರ್ ಹತ್ರ ಕರ್ಕೊಂಡು ಹೋಗಿ. ಅಲ್ಲಿ ನ್ಯಾಯ ತೀರ್ಮಾನ ಆಗ್ಲಿ, ಅಂತ ಸರಿ, ಆದ್ರೆ ನಾಳೆ ಬೆಳಿಗ್ಗೆ ಕೋರ್ಟ್‌ಗೆ ಹೋಗೋವರ್ಗೂ ನಿದ್ದೆ ಮಾಡ್ತಾ ಇರು. ಶಿವಪ್ಪನಿಗೆ ತೊಂದ್ರೆ ಕೊಡ್ಬೇಡ ಅಂದ ಮಾವಯ್ಯ. ದೆವ್ವ ಒಪ್ತು. ಎಲ್ರೂ ಮನೆಗಳಿಗೆ ಹೊರಟ್ರು.

ಬೆಳಗ್ಗೆ ಕೋರ್ಟಿನಲ್ಲಿ ಕೆಂಪಯ್ಯ, ಶಿವಪ್ಪ ಹಾಜರ್. ಏನಾದ್ರೂ ಹೆಚ್ಚು ಕಡಿಮೆ ಆದ್ರೆ ಇರ್ಲಿ ಅಂತ ಅರಿಷ್ಣ ಕುಂಕ್ಮ ತಗೊಂಡು ಮಾವಯ್ಯ ಪ್ರೇಕ್ಷಕರ ನಡುವೆ ಕೂತಿದ್ದ. ರೆಂಟ್ ಕಂಟ್ರೋಲ್ ಆಫೀಸರ್ ಬಂದ್ರು. ಎಲ್ರೂ ಎದ್ದು ನಿಂತ್ರು. ಅವ್ರು ಕುರ್ಚೀಮೇಲೆ ಕೂತ ಮೇಲೆ ಕೆಲ್ಸ ಶುರು ಆಯ್ತು.

ಕೇಸ್ ನಂಬರ್ ಹದಿನಾಲ್ಕು ಬಾರ್ ತೊಂಭತ್ತನಾಲ್ಕು, ಮಾರೀಚಾಪುರದ ನಾಲ್ಕನೇ ಮುಖ್ಯ ಬೀದಿ, ಹದಿನಾರನೇ ಅಡ್ಡಬೀದಿ. ಅನಾಥರೈಸ್ಡ್ ಆಕ್ಯುಪೇಷನ್ ಅಂತ ಕೆಂಪಯ್ಯ ಕೂಗ್ದ.

ಅನಾಥರೈಸ್ಡ್ ಆಕ್ಯುಪೆಂಟ್ ಯಾರು? ಅಂತ ಆಫೀಸರ್ ಕೇಳಿದ್ರು. ಆ ಮನೇಲಿ ಹೊಕ್ಕೊಂಡಿದ್ದ ದೆವ್ವಾನ ಶಿವಪ್ಪನ ಮೇಲೆ ಆವಾಹನೆ ಮಾಡಿ ಕೋರ್ಟಿಗೆ ಕರೆತಂದಿದ್ದೇನೆ. ಯುವರ್ ಹಾನರ್. ಅದು ನಿಮ್ಮ ಹತ್ರಾನೇ ಮಾತಾಡ್ಬೇಕಂತೆ ಅಂದ ಕೆಂಪಯ್ಯ.

ಶಿವಪ್ಪ ಅಷ್ಟು ಹೊತ್ತಿಗೆ ತೇಲುಗಣ್ಣು ಮೇಲುಗಣ್ಣು ಮಾಡಿ ಕಣ್ಣು ಮುಚ್ಚಿದ್ದ. ಎರಡು ನಿಮಿಷದ ನಂತರ ಅವನು ಕಣ್ಣು ಬಿಟ್ಟಾಗ ಕಣ್ಣುಗಳು ಕೆಂಪಗೆ ಹೊಳೆಯುತ್ತಿದ್ದವು. ಗೊಗ್ಗರು ದನಿಯಲ್ಲಿ ಶಿವಪ್ಪ ಮಾತನಾಡಲು ಪ್ರಾರಂಭಿಸಿದ.

ನಾನೊಬ್ಬ ಬ್ರಹ್ಮ ರಾಕ್ಷಸ ಯುವರ್ ಆನರ್. ನಾನೇ ಸ್ವಾಮಿ ಆ ಮನೇಲಿರೋದು. ಆದರೆ ಅನಾಥರೈಸ್ಡ್ ಆಕ್ಯುಪೆಂಟ್ ಅಲ್ಲ. ನಾನೇ ಆ ಮನೆ ಮಾಲೀಕ. ಮೊನ್ನೆ ಸತ್ತ ಮುದುಕ ಆ ಮನೇಲಿದ್ದ ಬಾಡಿಗೆದಾರ. ಇಪ್ಪತ್ತು ವರುಷದ ಹಿಂದೆ ನನ್ನ ಮನೇನ ಅವನಿಗೆ ಬಾಡಿಗೆಗೆ ಕೊಟ್ಟಿದ್ದೆ ಗವರ್ನಮೆಂಟ್ ಆಫೀಸರ್ ಸಂಭಾವಿತ ಅಂತ ಭಾವಿಸ್ಕೊಂಡಿದ್ದು ಶುದ್ಧ ತಪ್ಪಾಗಿತ್ತು. ಆ ಲುಚ್ಚಾ ನನ್ಮಗ ಬಾಡಿಗೇನೂ ಕೊಡ್ಲಿಲ್ಲ. ಮನೇನೂ ಬಿಟ್ಟು ಕೊಡ್ಲಿಲ್ಲ. ನಾನೂ ನನ್ನ ಹೆಂಡ್ತಿ, ಆ ಮನೇ ಗ್ಯಾರೇಜಿನಲ್ಲೇ ನಮ್ಮ ಜೀವನ ಕಳೆದ್ವಿ. ವರ್ಷಗಟ್ಲೆ ಕೋರ್ಟಿಗೆ ಅಲೆದ್ರೂ ಎವಿಕ್ಷನ್ ಆರ್ಡ್‌ರ್ ಆಗ್ಲಿಲ್ಲ. ಆ ಪಾಪಿ ನನ್ಮಗ ಲಂಚ ಕೊಟ್ಟು ಸರಿಮಾಡ್ಕೊಂಡು ಬಿಟ್ಟಿದ್ದ. ಕೊನೆಗೆ ನಾನೂ ನನ್ನ ಹೆಂಡ್ತಿ ಒಟ್ಟಿಗೇ ಬಸ್ ಅಪಘಾತದಲ್ಲಿ ತೀರಿಕೊಂಡ ತಕ್ಷಣ ನನ್ನ ಮನೆಗೇ ನಾನು ಬಂದು ಕೂತೆ. ಗಟ್ಟಿ ಪಿಂಡ ಆ ಮುದುಕ. ಹೆದರ್ಲಿಲ್ಲ. ನಾನು ಎಷ್ಟು ನಕ್ಕು ಬಾಗಿಲು ಬಡಿದ್ರೂ ಮನ್ಲೇ ಠಿಕಾಣಿ ಊರಿದ್ದ. ಮೊನ್ನೆ ಆತ ಸತ್ಮೇಲಿಂದ ನಾನು ಸುಖವಾಗಿದ್ದೇನೆ. ಈವಾಗ್ಲಾದ್ರೂ ಸ್ವಾಮಿಯೋರು ನನಗೆ ಸೆಲ್ಫ್ ಆಕ್ಯುಪೇಷನ್ ಕೊಟ್ಟು ನ್ಯಾಯ ದಯಪಾಲಿಸ್ಬೇಕು. ಅಂತ ಹೇಳ್ತು ಆ ಬ್ರಹ್ಮ ರಾಕ್ಷಸ.

ಸತ್ಮೇಲೆ ಸುಖವಾಗಿ ಸ್ವರ್ಗಕ್ಕೆ ಹೋಗೋದು ಬಿಟ್ಟು ಪುನಃ ಈ ಭೂಲೋಕಕ್ಕೆ ಯಾಕ್ರಿ ಬಂದ್ರೀ ಅಂತ ಕೇಳಿದ್ರು ಆಫೀಸರ್. ನಮ್ಮ ಪ್ರಾಣ ತಿನ್ನೋಕ್ಕೆ ಅಂತ ಮನಸ್ಸಿನಲ್ಲೇ ಅಂದ್ಕೊಂಡ್ರು.

ಅಯ್ಯೋ ಅದೊಂದು ಕಥೆ ಸ್ವಾಮಿ. ಮನೆ ಖಾಲಿ ಮಾಡ್ಸೋ ತಾಖತ್ತಿಲ್ಲಾ ಅಂತ ನನ್ನ ಹೆಂಡ್ತಿ ನನ್ನ ಸದಾ ಸತಾಯಿಸ್ತಿದ್ಲು. ಆದರ್ಶ ಹಿಂದೂ ಸಾಧ್ವಿ ಅವಳು. ನನ್ನ ಪ್ರಾಣ ಹಿಂಡಿಬಿಟ್ಲು. ನಾವಿಬ್ರೂ ಒಟ್ಟಿಗೇ ಸತ್ತಾಗ ಯಮದೂತರು ನಮ್ಮಿಬ್ಬಿರ್ನೂ ದೋಣೇಲಿ ವೈತರಣಿ ನದಿ ದಾಟಿಸ್ತಾ ಇದ್ರು. ನನ್ಹೆಂಡ್ತಿ ಎಲ್ಲಿಗೆ ಕರ್ಕೊಂಡು ಹೋಗ್ತಿದೀರಾ ಅಂತ ಅವರ್ನ ಕೇಳಿದ್ಲು. ಅವ್ರು ಸ್ವರ್ಗಕ್ಕೆ ತಾಯಿ ಅಂದ್ರು. ನನ್ನನ್ನೆಲ್ಲೀಗೆ ಸಾಗಿಸ್ತಿದೀರಾ ಅಂತ ನಾನು ಕೇಳ್ದೆ. ನಿಮ್ಮನ್ನೂ ಸಹಾ ಸ್ವರ್ಗಕ್ಕೆ ಕರೆದೊಯ್ಯುತ್ತಿದೀವಿ ಅಂದ್ರು. ನನಗೆ ಝುಂಗಾ ಬಲವೇ ಉಡುಗಿ ಹೋಯ್ತು. ಭೂಲೋಕದಲ್ಲಿ ಈ ಹಿಂಡೂ ಹೆಂಡ್ತಿ ಹತ್ರ ಹಿಂಡಿಸ್ಕೊಂಡಿದ್ದೇ ಅಲ್ದೆ ಸ್ವರ್ಗದಲ್ಲೂ ಅವಳ ಜೊತೆಗೇನೆ ........ ಹಿಂದೆ ಮುಂದೆ ನೋಡ್ದೆ ದುಡುಂ ಅಂತ ವೈತರಣಿ ಒಳ್ಗೆ ಧುಮುಕಿ ಈಜಿಕೊಂಡು ಈ ಕಡೆ ಭೂಲೋಕಕ್ಕೆ ಬಂದ್ಬಿಟ್ಟು ನಮ್ಮ ಮನೆ ಸೇರ್ಕೊಂಡು ಬಿಟ್ಟೆ. ಈಗ ಕೊನೇಗೆ ನನ್ನ ಮನೇಲಿ ನಾನೇ ವಾಸವಾಗಿರೋಕ್ಕೆ ಸಾಧ್ಯ ಆಗಿದೆ. ದಯವಿಟ್ಟು ಸೆಲ್ಫ್ ಆಕ್ಯುಪೇಷನ್ ಕೊಟ್ಬಿಡಿ.

ಅಲ್ರೀ, ಅಷ್ಟು ದೊಡ್ಡ ಮನೆ ಅದು. ತ್ರೀ ಬೆಡ್ ರೂಮ್ ಹೌಸು. ನೀವ್ರೋ ಒಬ್ರೇ ಇರೋದು ಅಂತೀರ. ನಾನು ಹ್ಯಾಗೆ ಸೆಲ್ಫ್ ಆಕ್ಯುಪೇಷನ್ ಕೊಡ್ಲಿ? ಮೇಲಿನ ಕೋರ್ಟ್‌ನಲ್ಲಿ ಬಿದ್ದು ಹೋಗುತ್ತೆ ಅಂದ್ರು ಆಫೀಸರ್.

ಸ್ವಾಮಿ ........ ಊರಾಚೆ ಇರೋ ಸರ್ವೆ ತೋಪಿನಲ್ಲಿ ಒಬ್ಳು ಮೋಹಿನಿ ಇದ್ದಾಳೆ. ಹೆಸರಿಗೆ ತಕ್ಕಂತೆ ಅಪ್ರತಿಮ ಸುಂದರಿ ಅವಳು. ಅಬ್ಬ ಅವಳ ನಡಿಗೇನೋ ಮುಗುಳ್ನಗೇನೋ ನೋಡಿದ್ರೆ ಅಧರಂ ಮಧುರಂ ವಕ್ಷಂ ಮಧುರಾ ಅಂತ ಮಧುರಾಷ್ಟಕಾನ ಅವಳನ್ನೇ ನೋಡಿ ಬರೆದದ್ದೇನೋ ಅನ್ನಿಸುತ್ತೆ. ಅವ್ಳು ನಂಜೊತೆ ಇರ್ತೀನಿ ಅಂತ ಒಪ್ಕೊಂಡಿದಾಳೆ. ಒಂದೆರಡು ಸಾವಿರ ವರ್ಷ ಅವಳ ಜೊತೆ ಹಾಯಾಗಿರೋಣ ಅಂತಿದೀನಿ. ಕೊಟ್ಬಿಡಿ. ದಯವಿಟ್ಟು ಸೆಲ್ಫ್ ಆಕ್ಯು ಪೇಷನ್ ಅಂತ ಬ್ರಹ್ಮ ರಾಕ್ಷಸ ಮಧುರಾಷ್ಟಕನಾ ತನಗೆ ಬೇಕಾದ ಹಾಗೆ ಪೋಲಿ ಪೋಲಿಯಾಗಿ ತಿರುಗಿಸ್ಕೊಂಡು ಗೋಗರೆಯಿತು.

ಆಗ್ಲೇ ಹೋಗ್ರಿ ಈ ಕೇಸ್ ಇಲ್ಲಿಗೇ ಮುಕ್ತಾಯ. ನೆಕ್ಸ್ಟ್ ಕೇಸ್ ಅಂತ ಕೂಗಿ ಆಫೀಸರ್ ತಮ್ಮ ಕೈ ತೊಳೆದುಕೊಂಡು ಬಿಟ್ಟರು.

ಶಿವಪ್ಪ ಮೆಲ್ಲಗೆ ಕಣ್ಣು ಬಿಟ್ಟ. ಅವನ ಮೈಯೆಲ್ಲಾ ಬೆವತು ಹೋಗಿತ್ತು. ಕೆಂಪಯ್ಯ ಮತ್ತು ಮಾವಯ್ಯ ಅವನನ್ನ ನಿಧಾನವಾಗಿ ಹೊರಕ್ಕೆ ಕರೆದುಕೊಂಡು ಹೋದರು.

* * *

ಈಗ ಆ ದೆವ್ವದ ಮನೇಲಿ ಗಹಗಹಿಸಿ ನಗೋದಾಗಲೀ, ಹುಡುಗಾಟದ ಬಾಗಿಲು ಬಡಿತವಾಗಲೀ ಯಾವುದೂ ಇಲ್ಲ. ರಾತ್ರಿ ಆಯಿತೂ ಅಂದ್ರೆ ಸಾಕು ಆ ಮೋಹಿನಿ ಬ್ರಹ್ಮರಾಕ್ಷಸನ್ನ ಹೀಯಾಳಿಸಿ ಬೈತಾ ಇರೋದು ಮಾತ್ರಾ ಸುಮಾರು ಹೊತ್ತಿನ ವರೆಗೂ ಕೇಳಿಸ್ತಾ ಇರುತ್ತೆ. ಕಳೆದ ಆಷಾಢ ಬಹುಳ ಅಮಾವಾಸ್ಯೆ ಮೋಹಿನಿಯ ನ್ಯಾಗಿಂಗ್ ತಡೆಯಲಾರದೆ, ಬ್ರಹ್ಮ ರಾಕ್ಷಸ ಮನೆ ಹೊರಗಿನ ಹುಣಸೇ ಮರ ಹತ್ತಿ ಕೂತಿತ್ತು.

ನರಕಕ್ಕೆ ಹೋಗಿದ್ರೇ ಎಷ್ಟೋ ಚೆನ್ನಾಗಿರ್ತಿತ್ತು. ಅಂತ ಅದು ಪ್ರಲಾಪಿಸ್ತಾ ಇರೋದನ್ನ ಆಷಾಢದ ಕುಳಿರ್ಗಾಳಿ ಆಸುಪಾಸಿನ ಮನೆಗೆಲ್ಲಾ ಮುಟ್ಟಿಸ್ತಾ ಇತ್ತು. ಆ ಮನೆಯೋರೆಲ್ಲಾ "ಅಯ್ಯೋ ಪಾಪ" ಅಂತ ತುಟಿ ಸಹಾನುಭೂತಿ ಸೂಚಿಸಿ ರಗ್ಗು ಹೊದ್ದು ಮಲಗಿದರಂತೆ.

---

ವರ್ಷದ್
ವ್ಯಕ್ತಿ,
ಹರ್ಷದ್
ಮೆಹ್ತಾ

**ಶಂಪ**

# ಚತುರ್ವಿಧ ಪರೀಕ್ಷೆಗಳು

**ಚಿಂತಾಮಣಿ ಕೊಡ್ಲೆಕೆರೆ**

ತುಂಬಾ ಶ್ರದ್ದೆಯಿಂದ ಮತ್ತು ಪ್ರಾಮಾಣಿಕತೆಯಿಂದ ನಾನು ಆರಂಭಿಸಿದ ಪ್ರಯೋಗವೊಂದು ವಿಫಲವಾದುದನ್ನು ನಾನು ದುಃಖದಿಂದ ದಾಖಲಿಸಬೇಕಾಗಿದೆ. ಒಳ್ಳೆಯ ಉದ್ದೇಶದಿಂದ ನಾನು ಹೊರಟರೂ ನನಗೆ ವೈರಿಗಳು ಜಾಸ್ತಿಯಾದರು. ನಿಜವಾಗಿ ನೋಡಿದರೆ ನನಗೆ ಯಾರೂ ವೈರಿಗಳಿಲ್ಲ. ಆದರೆ ಜನರು ಯಾಕೆ ಹೀಗೆ ವರ್ತಿಸುತ್ತಿದ್ದಾರೆ ಎಂಬುದು ನನಗೆ ದೊಡ್ಡ ಸಮಸ್ಯೆಯಾಗಿ ಬಿಟ್ಟಿದೆ. ನನ್ನ ಪ್ರಶ್ನೆ ಪತ್ರಿಕೆಯ ಕುರಿತು ಇವರೆಲ್ಲ ಹಾಸ್ಯವಾಗಿ ಮಾತನಾಡಿಕೊಳ್ಳುವುದೂ ನನ್ನ ಕಿವಿಗೆ ಬಿದ್ದಿದೆ.

ಈಗ ಒಂದು ವರ್ಷದ ಹಿಂದೆ ನಾನು ಏನನ್ನೋ ಓದುತ್ತಿರುವಾಗ ನನಗೆ ನಾಲ್ಕು ಸೂತ್ರಗಳು ದೊರೆತವು. ಅವರ ಪ್ರಕಾರ ನಾವು ಯಾವುದೇ ಕೆಲಸ ಮಾಡಲು (ಮಾಡದಿರಲು) ಆ ನಾಲ್ಕು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕು. ನಾಲ್ಕೂ ಪ್ರಶ್ನೆಗಳಿಗೂ ಸಮರ್ಪಕ ಉತ್ತರ ದೊರೆತರೆ ನಾವು ಮಾಡುತ್ತಿರುವ ಕಾರ್ಯದ ಬಗ್ಗೆ ಯಾವುದೇ ಅನುಮಾನ ಇಟ್ಟುಕೊಳ್ಳಬೇಕಾಗಿಲ್ಲ. ಆ ನಾಲ್ಕು ಪ್ರಶ್ನೆಗಳು ಹೀಗಿವೆ.

1. ಇದು ಸತ್ಯವೇ?
2. ಇದು ಸಂಬಂಧಪಟ್ಟ ಎಲ್ಲರಿಗೂ ಒಳ್ಳೆಯದನ್ನು ತರುವುದೇ? (ಇದು ನ್ಯಾಯ ಸಮ್ಮತವೇ?)
3. ಇದು ಒಳ್ಳೆಯ ಸಂಬಂಧ, ಒಳ್ಳೆಯ ಸ್ನೇಹ ಬೆಳೆಸಬಲ್ಲುದೇ?
4. ಇದು ಸಂಬಂಧಪಟ್ಟ ಎಲ್ಲರಿಗೂ ಲಾಭದಾಯಕವೇ?

ಈ ಸೂತ್ರಗಳು ನನ್ನ ಮನಸ್ಸಿಗೆ ಬಹಳ ಹಿಡಿಸಿದವು. ಇದರಿಂದಾಗಿ ನಾವು ಯಾವಾಗಲೂ ಸರಿಯಾದ ಹಾದಿಯಲ್ಲಿ ನಡೆಯುತ್ತೇವೆ ಎಂದು ನನಗೆ ತಕ್ಷಣ ಮನವರಿಕೆಯಾಗಿ ಹೋಯಿತು. ಜೀವನದ ಪ್ರತಿಯೊಂದು ಸಮಸ್ಯೆಯನ್ನೂ ಈ ನಾಲ್ಕು ಪ್ರಶ್ನೆಗಳ ಮೂಲಕ ಶೋಧಿಸಿದರೆ ಮುಗಿಯಿತು. ಎಷ್ಟು ಸಲೀಸು! ಇವು ನಿಜಕ್ಕೂ ದಿವ್ಯ ಮಂತ್ರಗಳೇ. ನನ್ನ ಜೀವನದಲ್ಲಿ ಇದನ್ನು ಪ್ರತ್ಯಕ್ಷವಾಗಿ ಪರೀಕ್ಷಿಸಬೇಕೆಂದು ನಾನು ತೀರ್ಮಾನಿಸಿದೆ. ಹಾಗೆ ತೀರ್ಮಾನಿಸಿದ ಕೆಲವೇ ನಿಮಿಷಗಳಲ್ಲಿ ನನ್ನ ಹೆಂಡತಿ 'ರಿಸೆಪ್ಷನ್‌ಗೆ ಹೋಗಿ ಬರೋಣ' ಎಂದಳು. ಅದು

ಅವಳ ದೂರದ ಸಂಬಂಧಿಯ ದೂರದ ಗೆಳತಿಯ ತಂಗಿಯ ಮದುವೆಯ ರಿಸೆಪ್ಷನ್. ನಾನು ನನ್ನ ಪ್ರಶ್ನೆ ಪತ್ರಿಕೆಯಿಂದ ತಲೆ ಮೇಲಕ್ಕೆತ್ತದೆ,

'ಇದು ಸತ್ಯವೇ?' ಎಂದು ಪ್ರಶ್ನಿಸಿದೆ.

'ಏನು ಹಾಗೆಂದರೆ?' ಎಂದಳು ಹುಬ್ಬುಗಂಟಿಕ್ಕಿ.

'ಎಲೆ ಮಡದಿಯೇ, ಹೇಳು ಇದು ಸತ್ಯವೇ?' ಎಂದು ಗಂಭೀರವಾಗಿ ಮತ್ತೊಮ್ಮೆ ಕೇಳಿದೆ.

'ಯಾವುದು ಸತ್ಯವೆಂದು ಕೇಳುತ್ತೀರಿ, ರಿಸೆಪ್ಷನ್ ಸತ್ಯವೆಂದೋ, ನಾವು ರಿಸೆಪ್ಷನ್‌ಗೆ ಹೋಗುವುದು ಸತ್ಯವೆಂದೋ?'

ನನ್ನ ಗಾಂಭೀರ್ಯವನ್ನು ಬಿಟ್ಟು ಕೊಡದೆ ನಾನು ಹೇಳಿದೆ 'ನೋಡು ಇಲ್ಲಿಯೇ ಪರೀಕ್ಷೆಯಾಗಿ ಹೋಯಿತು. ನಿನ್ನ ಗಲಿಬಿಲಿಗೊಂಡ ಮನಸ್ಸೇ ನೀನು ಮಾಡಬೇಕೆಂದಿರುವ ಕೆಲಸ ಸಮರ್ಪಕವಾಗಿಲ್ಲ ಎನ್ನುವುದನ್ನು ಸೂಚಿಸುತ್ತದೆ. ಅಲ್ಲಿಗೆ ಹೋಗುವುದು ಬೇಕಾಗಿಲ್ಲ. ನೀನಿನ್ನು ಒಳಕ್ಕೆ ಹೋಗಬಹುದು' ಎಂದು ಸ್ಪಷ್ಟವಾಗಿ ಹೇಳಿದೆ. ಈ ಪ್ರಶ್ನೆ ಪತ್ರಿಕೆಯನ್ನು ರೂಪಿಸಿದವನ ಬುದ್ಧಿವಂತಿಕೆಯ ಬಗೆಗೆ ನನಗೆ ಅಪಾರ ಮೆಚ್ಚುಗೆ ಮೂಡಿತು. ನನ್ನ ಹೆಂಡತಿಯ ನಿಜವಾದ ಉದ್ದೇಶ ರಿಸೆಪ್ಷನ್‌ಗೆ ಹೋಗುವುದಲ್ಲ. ಆ ನೆವದಲ್ಲಿ ಹಳೆಯ ಗೆಳತಿಯನ್ನು ಕೊರೆಯುವುದು, ಹೊಸಾ ಸೀರೆಯನ್ನು ಮೆರೆಯುವುದು. ನನ್ನ ಹೆಂಡತಿ ಮಾಡುವ ಎಲ್ಲ ಕೆಲಸಗಳೂ ತಪ್ಪು ಎಂದು (ಎಲ್ಲ ಗಂಡಂದಿರಂತೆಯೇ) ನಾನೂ ಬಲ್ಲೆ. ಆದರೆ ಅವಳನ್ನು ಇಷ್ಟು ವೈಜ್ಞಾನಿಕವಾಗಿ ವಿರೋಧಿಸುವುದು ನನಗೆ ಎಂದೂ ಸಾಧ್ಯವಾಗಿರಲಿಲ್ಲ. ಮೊದಲ ಪ್ರಯೋಗದ ಯಶಸ್ಸು ನನ್ನಲ್ಲಿ ಉತ್ತೇಜನವನ್ನು ಹುಟ್ಟಿಸಿತು.

ಈ ಚತುರ್ವಿಧ ಪರೀಕ್ಷೆಯ ಮುಂದಿನ ಪ್ರಯೋಗ ನನ್ನ ಆಫೀಸಿನಲ್ಲಿ ಏರ್ಪಟ್ಟಿತು. ನನ್ನ ಕೈ ಕೆಳಗೆ ಕೆಲಸ ಮಾಡುವ ಒಬ್ಬರು ಒಂದು ದಿನ ಕೈಕಟ್ಟಿ ನಿಂತು 'ನಾಳೆ ನನಗೆ ರಜಾ ಬೇಕು' ಎಂದರು. ನಾನು ಮೃದುವಾಗಿ 'ಇದು ಸತ್ಯವೇ' ಎಂದು ಕೇಳಿದೆ. 'ನಿಜ ಸಾರ್ ನಿಜವಾಗಲೂ ನನಗೆ ರಜೆ ಬೇಕು' ಎಂದು ಖಚಿತವಾದ ಧ್ವನಿಯಲ್ಲಿ ಹೇಳಿದರು. ನನಗೆ ಅವರ ಬಗೆಗೆ ಅಪಾರ ಮೆಚ್ಚುಗೆ ಮೂಡಿತು. ಮೊದಲ ಪರೀಕ್ಷೆಯಲ್ಲಿ ಪಾಸಾದ ಅವರನ್ನು ಮುಂದಿನ ಪರೀಕ್ಷೆಗೆ ಒಳಪಡಿಸಿದೆ.

'ಇದು ಸಂಬಂಧಪಟ್ಟ ಎಲ್ಲರಿಗೂ ಒಳ್ಳೆಯದನ್ನು ತರುವುದೇ?'

ಎದುರಿಗೆ ನಿಂತ ವ್ಯಕ್ತಿಗೆ ಈ ಪ್ರಶ್ನೆಯಿಂದ ತುಂಬ ಆಶ್ಚರ್ಯವಾಯಿತು. ನಗುತ್ತಾ ಅವರು 'ಅದು ಮಾತ್ರ ನನಗೆ ತಿಳಿಯದು ಸರ್' ಎಂದರು. 'ಹಾಗಾದರೆ ನಿಮಗೆ ರಜಾ ಕೊಡಲು ಸಾಧ್ಯವಿಲ್ಲ' ಎಂದು ಹೇಳಿದೆ. ಬೈದುಕೊಂಡು ಹೊರಗೆ ಹೊರಟುಹೋದರು. ಹೋಗಲಿ, ಹೋಗಲಿ, ಚತುರ್ವಿಧ ಪರೀಕ್ಷೆಗಳಲ್ಲಿ ಗೆಲ್ಲಲಾರದ ಇವರಿಗೆ ರಜೆಯೊಂದು ಬೇರೆ ಕೇಡು'! ಎಂದುಕೊಂಡೆ.

ನನ್ನ ಪ್ರಶ್ನೆ ಪತ್ರಿಕೆಯ ಮೂರನೆಯ ಪ್ರಯೋಗಕ್ಕೆ ಬಲಿಯಾದವಳು ನನ್ನ ತಂಗಿ. ಅವಳು ತನಗೆ ಒಂದು ಹೊಸ ಚೂಡಿದಾರ್ ಬೇಕೆಂದು ಮನವಿ ಸಲ್ಲಿಸಿ ಕೆಲವು ದಿವಸಗಳಾಗಿದ್ದವು. ಜ್ಞಾಪನ ಪತ್ರವನ್ನು ಸಲ್ಲಿಸಲು ಬಂದು ನಿಂತಳು. ಅವಳು ಆಗಲೇ ನನ್ನ ಪ್ರಶ್ನೆ ಪತ್ರಿಕೆಯ ಕುರಿತು ತಿಳಿದಿದ್ದಳೆಂದು ತೋರುತ್ತದೆ. 'ಇದು ಸತ್ಯವೇ' ಎಂದು ಕೇಳಿದ್ದಕ್ಕೆ ಲವಲೇಶವೂ ಅವಮಾನ ಪಡದೆ 'ಇದು ಸತ್ಯ' ಎಂದಳು. 'ಇದು ಸಂಬಂಧಪಟ್ಟ ಎಲ್ಲರಿಗೂ ಒಳ್ಳೆಯದನ್ನು ತರುವುದೇ?' ಮುಂದಿನ ಪ್ರಶ್ನೆ. ಅದಕ್ಕೆ ಅವಳು ಉತ್ತರ ಕೊಟ್ಟಿದ್ದನ್ನು ನೋಡಿದರೆ ಗಾಬರಿಯಾಯಿತು ನನಗೆ.

"ಖಂಡಿತವಾಗಿಯೂ ಇದು ಸಂಬಂಧಪಟ್ಟ ಎಲ್ಲರಿಗೂ ಒಳ್ಳೆಯದನ್ನು ತರುವುದು. ಒಳ್ಳೆಯ ಬಟ್ಟೆ ಒಳ್ಳೆಯ ಸಂಸ್ಕೃತಿಯ ಸೂಚಕ. ಒಳ್ಳೆಯ ಬಟ್ಟೆ ಒಳ್ಳೆಯ ನಡತೆಗೆ ಪ್ರೇರಕ. ಒಳ್ಳೆಯ ಬಟ್ಟೆ ಒಳ್ಳೆಯ ಹುಡುಗಿಗೆ ಪೂರಕ. ಒಳ್ಳೆಯ ಬಟ್ಟೆಯ ಯೋಚನೆಯೇ ಎಲ್ಲರಿಗೂ ರೋಚಕ. ಅದು ಕಣ್ಣಿಗೂ, ಮನಸ್ಸಿಗೂ ಹಿತಕಾರಕ. ನಿನ್ನ ತಂಗಿ ಅಷ್ಟು ಒಳ್ಳೆಯ ಬಟ್ಟೆ ಹಾಕಿದರೆ ನಿನಗೆ ಸಂತೋಷವಾಗುವುದಿಲ್ಲವೇ? (ನನ್ನ ಉತ್ತರಕ್ಕೆ ಅವಳು ಕಾಯಲಿಲ್ಲ) ಖಂಡಿತವಾಗಿಯೂ ಸಂತೋಷವಾಗುತ್ತದೆ. ನನಗೆ ಸಂತೋಷವಾಗುವುದಿಲ್ಲವೇ? ಯಾರು ಹಾಗೆ ಹೇಳಿದವರು? ಇನ್ನು – ನನ್ನ ಮುದ್ದಿನ ಅತ್ತಿಗೆ. ಅವಳಿಗಂತೂ ತುಂಬಾ ಸಂತೋಷವಾಗುತ್ತದೆ. ಉಳಿದಿದ್ದು ನನ್ನ ಗೆಳತಿಯರು. ಅವರೆಲ್ಲಾ ಅಷ್ಟು ಒಳ್ಳೆ ಡ್ರೆಸ್ ನೋಡಿ ಹೊಟ್ಟೆ ಉರಿದು ಹೋಗುತ್ತಾರೆ, ನೋಡುತ್ತಿರು ಅಣ್ಣಾ" ಎಂದು ತನ್ನ ಕಿರು ಭಾಷಣವನ್ನು ಮುಗಿಸಿದಳು.

"ಮುದ್ದಿನ ತಂಗೀ, ನನಗೆ ಚೂಡಿದಾರ್ ಕೊಡಿಸುವುದು ಸಾಧ್ಯವಿಲ್ಲ ಎಂದು ನಾನು ವಿಷಾದ ಪೂರ್ವಕವಾಗಿ ತಿಳಿಸುತ್ತಿದ್ದೇನೆ" ಎಂದು ನಾನು ಆರಂಭಿಸಿದೆ. 'ಯಾಕೆ ಅಣ್ಣಾ!' ಎಂದಳು ದುಗುಡದಿಂದ. "ನಿನ್ನ ನಿರ್ಧಾರ" ಉತ್ತಮ ಗೆಳೆತನಕ್ಕೆ ಪೂರಕವೇ? ಎಂಬುದು ನಾನು ಕೇಳಲಿರುವ ಮೂರನೇ ಪ್ರಶ್ನೆಯಾಗಿತ್ತು. ಆದರೆ ನಿನ್ನ ಮಾತಿನಿಂದ ಆಗಲೇ ನಿನ್ನ ಡ್ರೆಸ್ ನಿನ್ನ ಗೆಳತಿಯರ ಹೊಟ್ಟೆ ಉರಿಸುವುದೆಂದು ತಿಳಿಯಿತು. ಇಂಥ ಕಾರ್ಯವನ್ನು ನಾನು ಪ್ರೋತ್ಸಾಹಿಸಲಾರೆ ಎಂದು ಹೇಳಿದೆ. ಅವಳು ಹೊರಟು ಹೋದ ಬಳಿಕ ನನ್ನ ಕಿಸೆಯಲ್ಲೇ ನಗುತ್ತಿದ್ದ ಐದುನೂರು ರೂಪಾಯಿಗಳನ್ನು ಪ್ರೀತಿಯಿಂದ ನೇವರಿಸಿದೆ.

ನೀವೇ ಕಂಡಂತೆ ಪೆಟ್ಟಿನವರೆಲ್ಲರೂ ಮೊದಲ ಪ್ರಶ್ನೆಗಳಲ್ಲೆ ಫೇಲಾಗುತ್ತಿದ್ದರು. ನಾಲ್ಕನೇ ಪ್ರಶ್ನೆಯ ವರೆಗೂ ಬಂದವರು 'ಇಲ್ಲವೇ ಇಲ್ಲ' ಎನ್ನುವಷ್ಟು ಕಡಿಮೆ. ಆ ಪ್ರಯತ್ನವನ್ನು ಒಮ್ಮೆಯಾದರೂ ಮಾಡಿದವಳು ನನ್ನ ತಂಗಿಯೇ. ಇಂಥದೇ ಇನ್ನೊಂದು ಖರೀದಿಯ ಮನವಿ ತಂದು ಮೂರೂ ಪ್ರಶ್ನೆಗಳನ್ನು ಸಲೀಸಾಗಿ ಎದುರಿಸುತ್ತ ಹೋದಳು. ಆಗ ಗಾಬರಿಯಾಗಿದ್ದು ನನಗೆ. ಇದು ಚೂಡಿದಾರಗಿಂತ ಪೆಟ್ಟಿನ ಬೆಲೆಯ ಬೇಡಿಕೆ. ಉಗುಳು ನುಂಗುತ್ತಾ 'ಇದು ಸಂಬಂಧಪಟ್ಟ ಎಲ್ಲರಿಗೂ ಲಾಭದಾಯಕವೇ?' ಎಂದು ಕೇಳಿದೆ. 'ಖಂಡಿತವಾಗಿ' ಎಂದು ಉತ್ತರಿಸಿದಳು. ನಾನು ಧೈರ್ಯ ತಂದುಕೊಂಡು 'ಆದರೆ, ಇದು ನನಗೆ ಹೇಗೆ ಲಾಭದಾಯಕ?' ಎಂದು ಕೇಳಿದೆ. ತನ್ನ ಹಿಂದಿನ ಸಿಟ್ಟೆಲ್ಲವನ್ನೂ ಅದುಮಿಕೊಂಡಿದ್ದ ಅವಳು ಒಮ್ಮೆಲೇ ಸ್ಫೋಟಿಸಿದಳು. 'ಯಾವುದೇ ಖರ್ಚಿನ ಬಾಬ್ತು ನಿನಗೆ ಲಾಭದಾಯಕವಾಗುವುದು ಹೇಗೆ?

ಇದೀಗ ನಾನು ಗೆದ್ದಿದ್ದೆ. ನಾನು ನಿಧಾನವಾಗಿ ಹೇಳಿದೆ 'ತಂಗೀ, ನಿನಗೆ ಸಹಾಯ ಮಾಡಬೇಕೆಂದೇ ನನ್ನ ಅಂತರಾಳದ ಆಸೆ. ಆದರೆ ನಾನು ಈ ಪ್ರಶ್ನೆ ಪತ್ರಿಕೆಯನ್ನು ಸಮಾಧಾನ ಪಡಿಸದೆ ಮುಂದೆ ಹೋಗಲಾರೆ. ಸಂಬಂಧಪಟ್ಟವರಿಗೆ ಅದರಲ್ಲೂ ಪ್ರಶ್ನೆ ಕೇಳುತ್ತಿರುವ ನನಗೆ– ನನಗೇ – ಲಾಭದಾಯಕವಲ್ಲದ ಕೆಲಸದಲ್ಲಿ ನಾನು ಹೇಗೆ ತೊಡಗಲಿ? ದಯವಿಟ್ಟು ಸಹಕರಿಸು'. ದುಃಖದಿಂದ ಅವಳು ಹೊರಟು ಹೋದಳು.

ಹೀಗೆ ಮೊದಲ ಪ್ರಯೋಗಗಳೆಲ್ಲವೂ ನನಗೆ ಹಿತಕರವಾಗಿದ್ದವು. ಸಾಲ ಕೇಳುವವರು ಕಡಿಮೆಯಾದರು. ಸುಳ್ಳು ಸುದ್ದಿಗಳನ್ನು, ಗಾಸಿಪ್‌ಗಳನ್ನು ಹಬ್ಬಿಸುವವರು ನನ್ನೆದುರು ನಿಲ್ಲದಾದರು. ಚಿಂತಾಮಣಿ ಸುಲಭ ಸಾಧ್ಯವಲ್ಲ ಎಂಬುದು ಅವರಿಗೆ ಮನವರಿಕೆ ಆಗುತ್ತಾ ಹೋದಂತೆ ನನಗೂ ನನ್ನ ಪ್ರಶ್ನೆ ಪತ್ರಿಕೆಯ ಮೇಲಿನ ವಿಶ್ವಾಸ ಗಾಢವಾಗುತ್ತಾ ಹೋಯಿತು.

ಆದರೆ ಇತ್ತೀಚಿನ ದಿನಗಳಲ್ಲಿ ನನ್ನ ಮೇಲೆಯೇ ಈ ಪ್ರಶ್ನೆ ಪತ್ರಿಕೆಯ ದಾಳಿ ನಡೆದಿದೆ. ಅದು ನಡೆದಿರುವ ರೀತಿಯನ್ನು ನೋಡಿದರೆ 'ಪೂರ್ವ ನಿಯೋಜಿತ' ಎಂದು ಅನಿಸುವಂತಿದೆ. ಒಂದು ಬೆಳಿಗ್ಗೆ ಎದ್ದು 'ಕಾಫಿ ಮಾಡಿ ಕೊಡು' ಎಂದರೆ ನನ್ನವಳು 'ಇದು ಸತ್ಯವೇ' ಎಂದು ಕೆಣಕಿದಳು. ನಾನೂ ಮೊಂಡನಂತೆ 'ಸತ್ಯ' ಎಂದೆ. 'ಆದರೆ ಇದು ಸಂಬಂಧಪಟ್ಟ ಎಲ್ಲರಿಗೂ ಒಳ್ಳೆಯದು ಮಾಡುವುದಿಲ್ಲ' ಎಂದು ಮಗ್ಗುಲು ಬದಲಿಸಿ ನಿದ್ದೆ ಹೋದಳು. "ಕಾಲೇಜಿನಿಂದ ಬರುವಾಗ ಸ್ವಲ್ಪ ಪೋಸ್ಟಾಫೀಸಿಗೆ..... ಎಂಬ ನನ್ನ ವಾಕ್ಯ ಮುಗಿಯುವ ಮೊದಲೇ ನನ್ನ ತಂಗಿ 'ಇದು ನ್ಯಾಯ ಸಮ್ಮತವಲ್ಲ ಅಣ್ಣಾ' ಎಂದು ನನ್ನ ಬೇಡಿಕೆಯನ್ನು ತಿರಸ್ಕರಿಸಿದಳು. ನಾನು ಆಫೀಸಿನಲ್ಲಿ ಯಾವುದೇ ಕೆಲಸ ಮಾಡಲು ಸೂಚಿಸಲಿ, ನನ್ನ ಸಹೋದ್ಯೋಗಿಗಳು,

'ಇದು ಸಂಬಂಧಪಟ್ಟ ಎಲ್ಲರಿಗೂ ಲಾಭದಾಯಕವೇ?' ಎಂದು ಪ್ರಶ್ನಿಸಿಕೊಳ್ಳುತ್ತಲೇ ಇರುತ್ತಾರೆ – ತಿಂಗಳುಗಟ್ಟಲೆ. (ತಮ್ಮ ಲಾಭವನ್ನೂ ಮಾಡಿಕೊಳ್ಳುತ್ತಿದ್ದಾರೆ?)

ಆದುದರಿಂದ ನಾನು ನನ್ನ ಚತುರ್ವಿಧ ಪರೀಕ್ಷೆಗಳನ್ನು ಪರಿಚಿತ ವಲಯಗಳಲ್ಲಿ ಈಗ ಪ್ರಯೋಗಿಸುತ್ತಿಲ್ಲ. ಅಪರಿಚಿತರ ಎದುರು ನಿರ್ದಾಕ್ಷಿಣ್ಯವಾಗಿ ಪ್ರಯೋಗಿಸುತ್ತಿದ್ದೇನೆ. 'ಮಾಡಬೇಕೇಕೆ?' ಎಂದುಕೊಳ್ಳುವ ನಾನೇ ಪ್ರತ್ಯಕ್ಷ ಮಾಡಬೇಕಾದ – ಕೆಲಸಗಳ ಸಂದರ್ಭದಲ್ಲೆಲ್ಲಾ ಈ ಪ್ರಶ್ನೆ ಪತ್ರಿಕೆಯ ಉಪಯೋಗ ಪಡೆದು ಹಾಯಾಗಿರುತ್ತೇನೆ. ಆದರೆ ಇದರಿಂದಾಗಿ ನನ್ನ ತೂಕ ಜಾಸ್ತಿಯಾಗಿದೆ. ಆರೋಗ್ಯದ ಮೇಲೆ ಅದರ ತೊಂದರೆಗಳೂ ಕಾಣಿಸಿಕೊಳ್ಳಲು ಆರಂಭವಾಗಿವೆ. ಡಾಕ್ಟರ್ ಹತ್ತಿರ ಹೋಗಬೇಕೆಂದು ಕೊಂಡರೂ ತುಂಬಾ ಸಂಕೋಚಪಟ್ಟೆ. ಯಾಕೆಂದರೆ ಈ ಡಾಕ್ಟರ್ ಕೆಲವೇ ತಿಂಗಳ ಹಿಂದೆ ನನ್ನ 'ಪ್ರಶ್ನ ಪತ್ರಿಕೆ'ಯ ಪ್ರಯೋಗಕ್ಕೆ ಒಳಗಾಗಿ ನನ್ನ ಮೇಲೆ ಸಿಕ್ಕಾಪಟ್ಟೆ ರೇಗಿದ್ದರು ಮತ್ತೆ ಬರಬಾರದೆಂದೂ ತಿಳಿಸಿದ್ದರು. ಆದರೂ ಧೈರ್ಯವಹಿಸಿ ಅವರ ಬಳಿ ಹೋಗಿ ನನ್ನ ಕಷ್ಟಗಳನ್ನು ನಿವೇದಿಸಿಕೊಂಡೆ. ಎಲ್ಲವನ್ನೂ ಶಾಂತವಾಗಿ ಕೇಳಿ 'ಚತುರ್ವಿಧ ಪರೀಕ್ಷೆಗಳೇ ನನ್ನ ಆರೋಗ್ಯದ ತೊಂದರೆಗೆ ಮೂಲ ಕಾರಣ' ಎಂದು ಸ್ಪಷ್ಟವಾಗಿ ಹೇಳಿ ದಿನಾಲೂ ಬೆಳಿಗ್ಗೆ ಒಂದು ಗಂಟೆ ನಡೆದಾಡುವ, ಗುಳಿಗೆ ತಿನ್ನುವ ........ ಲಿಸ್ಟ್ ಕೊಟ್ಟರು. ನಂಬಲಾಗದಷ್ಟು ಫೀಸನ್ನೂ ಕಿತ್ತುಕೊಂಡರು. 'ಇದು ಸತ್ಯವೇ, ನ್ಯಾಯ ಸಮ್ಮತವೇ, ಲಾಭದಾಯಕವೇ .........' ಎಂದು ನನ್ನ ಬಾಯಿಂದ ಹೊರ ಬೀಳಲು ಚಡಪಡಿಸುತ್ತಿದ್ದ ಪ್ರಶ್ನೆಗಳನ್ನು ಹೇಗೋ ತಡೆದು ಆಸ್ಪತ್ರೆಯಿಂದ ಹೊರಗೆ ಬಂದೆ. ನನ್ನ ಮೇಲಿನ ಎಷ್ಟೋ ಜನರ ಸಿಟ್ಟನ್ನು ಈ ಡಾಕ್ಟರು ತನ್ನ ಫೀಸಿನ ಮೂಲಕ ತೀರಿಸಿಕೊಂಡಂತಿತ್ತು. 'ಇದು ನ್ಯಾಯ ಸಮ್ಮತವಲ್ಲ' ಎಂದು ನನ್ನ ಮನಸ್ಸು ಚೀರುತ್ತಲೇ ಇತ್ತು.

---

ಅಮೆರಿ
ಕರಿ –
ಟನ್ಡ್ ಮರಿ
ಕರಿ ಬರೆದ ಲಿಮರಿ –
ಕ್ಗಳಿಗೆ ಎಡಿ –
ಟರ್ ಕುಡಿ –
ಸಿದ ಟೀ
ಯೇ ರಾಯಲ್ ಟೀ

**ಶಂಸ**

# ಹನುಮಣ್ಣನಿಗೆ ಗುರುಕೃಪೆ

ಅ.ರಾ.ಸೇ

ಹನುಮಣ್ಣ ಗಮನಾರ್ಹವಾದ ವ್ಯಕ್ತಿ. ಅವನು ಜೀವಿಸಿದ್ದ ಕಾಲದಲ್ಲಿ ಅವನು ಮಾಡಿಕೊಂಡ ಕತೆಗಳು ಹಲವಾರು. ಅವನ್ನು ಎಸ್ಕೇಪೇಡ್ಸ್ ಎನ್ನುವುದು ಬಹಳ ಸೂಕ್ತ.

ಅವನೊಬ್ಬ ಬೀದಿಯ ಮಾರಾಟಗಾರ. ಉಪ್ಪಿನಿಂದ ಹಿಡಿದು ಚಕ್ಕೆ, ಮೆಣಸು, ಲವಂಗಗಳವರೆಗೆ ಅವನ ಕಾರ್ಯವ್ಯಾಪ್ತಿ ನಡೆದಿತ್ತು. ಅವನ ಉಡುಪು, ಕಚ್ಚೆ ಪಂಚೆ ಅಂಗಿಯಿಂದ ಆರಂಭಿಸಿ ಸಫಾರಿಯವರೆಗೂ ಬದಲಾವಣೆ ಹೊಂದುತ್ತಿತ್ತು. ಬಾಯಲ್ಲಿ ಯಾವಾಗಲೂ ತಾಂಬೂಲಪ್ಲಸ್ ತಂಬಾಕು. ನಗುಮುಖ. ಜೊತೆ ಜೊತೆಗೆ ವೇದಾಂತದ ಮಾತು.

ಅವನಿಗೊಂದು ವಿಸ್ಮಯ: ಪರಬ್ರಹ್ಮವು ನಿರಾಕಾರ, ನಿರ್ಗುಣ, ನಿರ್ವಿಶೇಷ, ಕರ್ಮಲೇಪವಿಲ್ಲದ್ದು. ಹೀಗಿದ್ದರೂ ಈ ಪ್ರಪಂಚ ಏಕೆ ಹೀಗೆ ಕೊಳೆತು ನಾರುತ್ತಿದೆ? ಈ ಪ್ರಶ್ನೆಯನ್ನು ಆಗಾಗ ಅವನು ಕೇಳುತ್ತಲೇ ಇದ್ದ. ಸಂಜೆ ಐದರ ಮೇಲೆ ಈ ಪ್ರಶ್ನೆ ಅವನ ಬಾಯಿಂದ ಹೊರಹೊಮ್ಮುತ್ತಿತ್ತು. ಐದು ಗಂಟೆ ಸುಮಾರಿಗೆ ಅವನು ಕಾದಂಬರೀ ಪಾನ ಮಾಡುತ್ತಿದ್ದ. ಆತ್ಮ, ಬ್ರಹ್ಮ, ಉಪಾದಿ, ಅವಸ್ಥೆ, ಅಸ್ತಿ, ಭಾತಿ, ಪ್ರಿಯ, ಸಚ್ಚಿದಾನಂದಗಳೆಂಬ ಶಬ್ದಗಳ ಹೊಳೆ, ನಿರಂತರವಾಗಿ ಬಾಯಿಂದ ಹೊರ ಹೊಮ್ಮುತ್ತಿತ್ತು.

ಒಮ್ಮೆ ಅವನು ಒಬ್ಬ ಹೆಣ್ಣು ಮಗಳಿಗೆ ಬಳೆ ತೊಡಿಸಲು ಹೋಗಿ, ಕೈಹಿಡಿದೆಳೆದು ಬಡಿಸಿಕೊಂಡಿದ್ದ. ಮತ್ತೊಮ್ಮೆ ಪಾನ – ನಿರೋಧ ಸಭೆಯಲ್ಲಿ ಜಗತ್ತಿನ ಎಲ್ಲ ಸಮಸ್ಯೆಗಳಿಗೂ ಒಂದೇ ಪರಿಹಾರ. ಅದೇ ಮದ್ಯ ಎಂದು ಹೇಳಿ, ಪೋಲೀಸರ ಕೈಲಾಠಿಯ ಏಟು ತಿಂದು, ರಾತ್ರಿಯೆಲ್ಲಾ ವೇದಿಕೆಯ ಮೇಲೆ ಕಾಲ ಕಳೆದಿದ್ದ.

ನಮ್ಮೂರಿಗೆ ಬಂದಾಗ ಅವನು ಗುಂಡಮಾವನ ಮನೆಯ ಕಟ್ಟೆಯ ಮೇಲೇ ಕಾಲ ಕಳೆಯುತ್ತಿದ್ದ. ಯಾವ ಶ್ರೋತೃಗಳಿಲ್ಲದಿದ್ದರೂ ವೇದಾಂತ ಬೋಧೆ ಮಾಡುತ್ತಿದ್ದ. ಗುಂಡಮಾವ 'ಯಾಕೆ ಹಂಗೆ ಒಟಗುಟ್ತಿಯಲೇ? ಸುಮ್ಮನೆ ಮಲಗು' ಎಂದರೆ ಅವನು 'ಸ್ವಾಮಿ ನಾನು ಬ್ರಹ್ಮ ವಿಚಾರ ಬೋಧೆ ಮಾಡ್ತಿನಿ' ಎನ್ನುತ್ತಿದ್ದ.

'ಯಾರಿಗೋ?'

'ಮನಸ್ಸಿಗೆ ಸ್ವಾಮಿ'

'ಇರದು ಬ್ರಪ್ಪ ಒಂದೇ ಅಲ್ಲೋ, ಮನಸೆಲ್ಲೈತೆ'

'ಹೌದು ಸ್ವಾಮಿ, ಸಬ್ಬಿಕ್ ಬ್ರಪ್ಪ ಒಂದೇ ಐತೆ'

ಹೀಗೆ ಹೇಳಿ ಹೊದ್ದು ಮಲಗುತ್ತಿದ್ದ.

ಆಗಾಗ ಸಾವಿತ್ರಮ್ಮನೋರು

'ಗುಂಡಪ್ಪಾ, ಅವನ್ಯಾಕೆ ಅಷ್ಟು ಹಚ್ಚಿಕೊಳ್ತೀ' ಎಂದು ಕೇಳಿದರೆ 'ಸಾವಿತ್ರವ್ವ, ಅವನು ಸಾಧಕ' ಎನ್ನುತ್ತಿದ್ದ. ಸಾವಿತ್ರಮ್ಮನವರು 'ಸಾಧಕನೋ ಬಾಧಕನೋ ಶಿವನೇ ಬಲ್ಲ' ಎಂದು ಗೊಣಗಿಕೊಳ್ಳುತ್ತಿದ್ದರು.

ಅವನನ್ನು ಮತ್ತೆ ಮತ್ತೆ ನೆನೆಸಿಕೊಳ್ಳುವಂತೆ ಮಾಡುವ ಕತೆಯೊಂದು, ನಾಲ್ಕಾರು ಜನಗಳ ಬಾಯಿಂದ ನನ್ನ ಕಿವಿಗೆ ಬಿತ್ತು. ಏನೋ ಹೇಳಿಕೆ ಮಾತು, ಹುರುಳಿಲ್ಲದ್ದು ಎಂದುಕೊಂಡು ಸುಮ್ಮನಿದ್ದೆ. ಆದರೆ ಹೇಳಿಕೆಯ ಮಾತು ಹಾರಿಹೋಗಲಿಲ್ಲ.

ಒಂದು ದಿನ ನಾನು ಮನೆಯಲ್ಲಿ ಕುಳಿತು ಅನುಭವಾಮೃತವನ್ನು ಓದುತ್ತಿದ್ದೆ. ಮಧ್ಯಾಹ್ನ ಎರಡು ಗಂಟೆ ಸಮಯ. ಸುಮಾರು ಮೂವತ್ತು ವರ್ಷ ವಯಸ್ಸಿನ ಹುಡುಗನೊಬ್ಬ ಒಬ್ಬ ಬ್ರಾಹ್ಮಣರೊಂದಿಗೆ ಮನೆಗೆ ಬಂದ. ಅವನನ್ನು ನಮ್ಮೂರ ಸಂತೆಯಲ್ಲಿ ನೋಡಿದ್ದೆ. ಪರಿಚಯವಿಲ್ಲ. ಅವನು ಹನುಮಣ್ಣನ ಮಗ ತಿಪ್ಪಣ್ಣನಂತೆ.

"ಸ್ವಾಮಿ, ನಮ್ಮಪ್ಪ ಹೋತು. ಅದು ಹೇಳಿತ್ತು, ತಮಾ ಗುರುಗಳನ್ನ ನಾನು ಹ್ವಾದ ಮೇಲೆ ಸ್ವಾಮೇರ ಹತ್ರ ಕರ್‍ಕಂಡ್ಹೋಗು ಅಂತ. ಕರ್‍ಕಂಬಂದದಿನಿ. ಗುರುಗಳ್ದು ಇನ್ನೂ ಊಟಾಗಿಲ್ಲ" ಎಂದು ತಿಪ್ಪಣ್ಣ ಹೇಳಿದ. ಅವನಿಗೆ ಕುಳಿತುಕೊಳ್ಳಲು ಹೇಳಿದೆ.

ಆ ಬ್ರಾಹ್ಮಣರಿಗೆ ಕಾಲು ತೊಳೆಯಲು ನೀರು ಕೊಟ್ಟು ಒಳಮನೆಯಲ್ಲಿ ಕೂಡಿಸಿದೆ.

"ಸ್ವಾಮಿ, ಈಗ ನೀರು ಕಾಯಿಸುತ್ತೇನೆ. ಅಡಿಗೆ ಸಿದ್ಧವಿದೆ. ಸ್ನಾನ, ಅನುಷ್ಠಾನ ಮುಗಿಸಿ ಭೋಜನ ಮಾಡಿ" ಎಂದೆ.

ಅವರು ಕಣ್ಣೀರಿಟ್ಟು "ಅಂಥ ವಸ್ತುವನ್ನು ಕಳೆದುಕೊಂಡ ನನಗೆ ಹಸಿವೇ ಇಲ್ಲ" ಎಂದರು.

ಊಟವಾದ ಮೇಲೆ ಅವರು ಹೇಳಿದ ಕತೆಯನ್ನು ಕೇಳಿದೆ. ಈಗಲೂ ಅದು ನಿಜವೇ ಎನ್ನುವ ವಿಸ್ಮಯ ಹೋಗಿಲ್ಲ.

ಆ ಬ್ರಾಹ್ಮಣರ ಹೆಸರು ಆನಂದ ಶಾಸ್ತ್ರಿ, ಅವರು ಬಾಳೇಹದ್ದಿನವರು. ವ್ಯಾಕರಣ, ಅಲಂಕಾರ, ವೇದಾಂತ ವಿದ್ವಾಂಸರು. ಅವರದು ಅಗ್ನಿಹೋತ್ರಿಗಳ ಮನೆತನ.

ಉಪನಯನವಾದ ಮೇಲೆ ಅವರು ಗುರುಕುಲವಾಸ ಮಾಡುತ್ತಿದ್ದರು. ಆಗಲೆ ಅವರಿಗೆ ಬ್ರಹ್ಮಜ್ಞಾನಿಗಳಾದ ಮಹಾತ್ಮರೊಬ್ಬರ ದರ್ಶನವಾಯಿತು. ವಿದ್ಯಾಭ್ಯಾಸ ಮುಗಿದ ಮೇಲೆ ಮಹಾತ್ಮರ ಸೇವೆಯಲ್ಲಿ ನಿಂತರು.

ಅಖಂಡ ತುರ್ಯಾವಸ್ಥೆಯಲ್ಲಿ, ಆನಂದ ಸಾಗರದಲ್ಲಿ ಓಲಾಡುತ್ತಿದ್ದ ಅವರಿಗೆ ಹುಚ್ಚು ಹಿಡಿದಿದೆಯೆಂದು ಜನಭಾವಿಸಿದ್ದರು. ಬ್ರಹ್ಮಾತ್ಮೈಕ್ಯ ಅನುಭವದಲ್ಲಿದ್ದ ಅವರು ಕೊಟ್ಟರೆ ವರ, ಇಟ್ಟರೆ ಶಾಪ. ಮಹದಾನಂದ ಮಗ್ನರಾದ ಅವರ ಸ್ಥಿತಿ ಮಾತಿನ ವರ್ಣನೆಗೆ ನಿಲುಕುವುದಲ್ಲ.

ಒಂದು ದಿನ ಶಾಸ್ತ್ರಿಗಳು ಮಹಾತ್ಮರನ್ನು ಮುಕ್ತಿಗಾಗಿ ಬೇಡಿಕೊಂಡರು.

ಗುರುಗಳು 'ಅಯ್ಯೋ ಹುಚ್ಚ, ನಿನ್ನ ಮನಸಿನ ತುಂಬ ಕೀರ್ತಿ ಕಾಮನೆಯಿದೆ. ನಾನು ಶ್ರೇಷ್ಠ, ವಿದ್ಯಾವಂತ ಎಂಬ ಅಹಂಕಾರ ತುಂಬಿದೆ. ನಿನಗೆಲ್ಲಿ ಮುಕ್ತಿ? ಆ ಅಹಂಕಾರ ಕಳೆದುಕೋ, ಆಮೇಲೆ ನೋಡೋಣ' ಎಂದರು.

ಶಾಸ್ತ್ರಿಗಳು 'ತನು ಮನ ಧನಗಳು ನಿಮ್ಮವು. ನನ್ನ ಅವಗುಣಗಳನ್ನು ಕಳೆದು ಮುಕ್ತಿಯನ್ನು ದಯೆಪಾಲಿಸಿ' ಎಂದರು.

ಗುರುಗಳು 'ಮುಕ್ತಿಯನ್ನು ಕೊಡಲು ಬರುವುದಿಲ್ಲ. ತಾನು ನಿತ್ಯ ಮುಕ್ತನೆಂದು ಅರಿತುಕೊಳ್ಳುವುದೇ ಮುಕ್ತಿ. ಬರೀ ಕೇಳಿದರೆ ಮುಕ್ತನೆಂಬುದು ಅನುಭವಕ್ಕೆ ಬರುವುದಿಲ್ಲ. ಮನನ, ನಿಧಿ ಧ್ಯಾಸನಗಳಿಂದ ಅನುಭವಕ್ಕೆ ತಂದುಕೊಳ್ಳಬೇಕು.' ಎಂದರು.

ಶಾಸ್ತ್ರಿಗಳು 'ನನಗೆ ಅರ್ಥವಾಗಲಿಲ್ಲ' ಎಂದರು.

ಅಷ್ಟು ಹೊತ್ತಿಗೆ ಹನುಮಣ್ಣ ಹೆಗಲ ಮೇಲೆ ಚೀಲ ಹೊತ್ತು ಅಲ್ಲಿಗೆ ಬಂದು ಮಹಾತ್ಮರಿಗೆ ನಮಸ್ಕರಿಸಿದ. ಗುರುಗಳು 'ಶಾಸ್ತ್ರಿ ನೀನು ಇವನಿಂದ ಉಪದೇಶ ಪಡೆದು ಸಾಧನೆ ಮಾಡು' ಎಂದು ಹೊರಟು ಹೋದರು.

ಹೀಗಾಗಿ ಶಾಸ್ತ್ರಿಗಳು ಹನುಮಣ್ಣನಿಂದ ಉಪದೇಶ ಪಡೆದರು. ಹನುಮಣ್ಣ ಯಾವ ಮಂತ್ರವನ್ನು ಶಾಸ್ತ್ರಿಗಳಿಗೆ ಉಪದೇಶ ಮಾಡಿದನೋ, ಆ ಪರಮಾತ್ಮನೇ ಬಲ್ಲ.

ಶಾಸ್ತ್ರಿಗಳಿಗೆ ಉಪದೇಶ ಮಾಡಿದ ಮೇಲೆ ಹನುಮಣ್ಣ ಊರಿಗೆ ಹಿಂದಿರುಗಿದ. ಆ ವಿಷಯವನ್ನು ಮರೆತೇ ಬಿಟ್ಟಿದ್ದ.

ಸುಮಾರು ಎರಡು ತಿಂಗಳ ಹಿಂದೆ, ಶಾಸ್ತ್ರಿಗಳಿಗೆ ಒಂದು ಕನಸು ಬಿದ್ದಿತಂತೆ. ಅದರಲ್ಲಿ ಗುರುಗಳು ಬಂದು 'ಶಾಸ್ತ್ರಿ, ನೀನು ಕೂಡಲೇ ಹನುಮಣ್ಣನ ಬಳಿಗೆ ಹೋಗು'. ಎಂದು ಹೇಳಿದರಂತೆ.

ಶಾಸ್ತ್ರಿಗಳು ಮಹಾಗೃಹಸ್ಥರು. ಅವರಿಗೆ ಸಹಸ್ರಾರು ಜನ ಶಿಷ್ಯರು ಇದ್ದಾರೆ. ಅವರ ಪಾಂಡಿತ್ಯವನ್ನು ಮೆಚ್ಚದವರೇ ಇಲ್ಲ.

ಅವರ ಸಂಸಾರ ಜೀವನ ಸುಖಮಯವಾಗಿತ್ತು. ಆದರೆ ಅವರಿಗೆ ಮುಕ್ತಿಯ ಹಂಬಲ ಬಿಟ್ಟಿರಲಿಲ್ಲ. ಅದು ಸಿಗುವ ಆಶೆ ಕ್ಷೀಣವಾಗಿ ಹೋಗಿತ್ತು. ಸಂಸಾರಿಯಾದವನಿಗೆ ಏನೆಲ್ಲ ಇದ್ದರೂ ತೃಪ್ತಿ ಇರುತ್ತದೆಯೇ!

ಶಾಸ್ತ್ರಿಗಳು, ಹನುಮಣ್ಣನನ್ನು ಹುಡುಕಿಕೊಂಡು ಹೊರಟರು. ಮನೆಯ ಯಜಮಾನಿಕೆಯನ್ನು ಹಿರಿಯ ಮಗನಿಗೆ ಒಪ್ಪಿಸಿ, ಆದಷ್ಟು ಬೇಗ ಬರುವುದಾಗಿ ತಮ್ಮ ಪತ್ನಿಗೆ ಹೇಳಿ, ಪ್ರಯಾಣ ಬೆಳೆಸಿದರು. ಅವರು ಹನುಮಣ್ಣನ ಊರಿಗೆ ತಲುಪಿದಾಗ ಸಂಜೆ ಐದು ಗಂಟೆಯಾಗಿರಬಹುದು.

ಹನುಮಣ್ಣನ ಮನೆಯೆನ್ನುವುದು ಒಂದು ಚಿಕ್ಕಗೂಡು. ಮನೆ ಹೊಕ್ಕರೆ ಒಂದು ಪಡಸಾಲೆ. ಒಂದು ಅಡಿಗೆ ಮನೆ.

ಹನುಮಣ್ಣನ ಹೆಂಡತಿ ಹೋಗಿ ಎಷ್ಟೋ ವರ್ಷಗಳಾಗಿದ್ದವು. ಅವನ ಮಗ ತಿಪ್ಪಣ್ಣನ ಹೆಂಡತಿ ತವರು ಮನೆಗೆ ಹೋಗಿದ್ದಳು. ಪಡಸಾಲೆಯ ತುಂಬಾ ಸೇದಿ ಎಸೆದ ಬೀಡಿಯ ಕೊರೆಗಳು. ಹನುಮಣ್ಣ ಒಂದು ಮೂಲೆಯಲ್ಲಿ ಕುಳಿತು ಸೀಸೆಯನ್ನೆತ್ತಿ ಹೆಂಡ ಕುಡಿದು, ಬೀಡಿ ಹಚ್ಚಿ

"ಲೇ ತಿಪ್ಪಗಾ, ನಿಂಗೇನ್ಗೊತ್ತಲೇ. ಇಡೀ ಬಾಳೇವು ಒಂದು ಕನಸು. ಅಂಥಾದ್ರಗೆ ಬೆಳ್ಗಿನ ಜಾವ ಬಿದ್ದ ಕನಸು ಎಲ್ಲಾರೂ ನಿಜ ಆಗ್ತತೇನೋ? ಇವತ್ತು ನಾನು ಬರ್ತಿನಿ ಅಂತ ಗುರುಗಳು ಹೇಳಿದರು. ಗುರು ಅಂದ್ರೇನು ಗೊತ್ತತೇನೋ? ಸಾಕ್ಷಾತ್ ಪರಬ್ರಹ್ಮ, ಇಡೀ ಜಗತ್ನೇ ಒಳಗೂ ಹೊರಗೂ ತುಂಬೆತೆ. ಅಂಥಾದ್ದು ಬರದೂ ಅಲ್ಲ ಹೋಗದೂ ಅಲ್ಲ. ನಮ್ಮ ಗುರುವಿನ ಮಹಾ ಸಮಾಧಿ ಆಗಿ ಹನ್ನೆಳ್ಡು ವರ್ಸಾತು. ಹೆಂಗೆ ಬರ್ತರಪಾ ಅವರು" ಎಂದು ಹೊಗೆ ಬಿಟ್ಟ.

ಬಾಗಿಲಲ್ಲಿ ಶಾಸ್ತ್ರಿಗಳು ಬಂದದ್ದು ಕಾಣಿಸಿತು. ಹನುಮಣ್ಣ ಬೀಡಿಯನ್ನೂ, ಸೀಸೆಯನ್ನೂ ಎಸೆದು ಎದ್ದುನಿಂತು, ಓಲಾಡಿ ಶಾಸ್ತ್ರಿಗಳ ಪಾದದ ಕಡೆ ತಲೆ ಮಾಡಿ, ಕೋಲಿನಂತೆ ಬಿದ್ದು ಬಿಟ್ಟ.

"ಬಂದ್ಯಾ – ನನ್ನಪ್ಪಾ; ಹೇಳಿದ ಮಾತು ಉಳಿಸ್ಗೆಂಡೆಲ್ಲಾ ನನಗುರುವೇ" ಎಂದ.

ಹನುಮಣ್ಣನಿಗೆ ಶಾಸ್ತ್ರಿಗಳು ಕಾಣಿಸಲಿಲ್ಲವಂತೆ. ಗುರುಗಳೇ ಕಾಣಿಸಿದರಂತೆ.

ಶಾಸ್ತ್ರಿಗಳು ಅದನ್ನು ನೋಡಿ ತಬ್ಬಿಬ್ಬಾದರು. ಅದನ್ನು ಅವರು ನಿರೀಕ್ಷಿಸಿರಲಿಲ್ಲ. ಆಕಸ್ಮಿಕವಾಗಿ ಅವರಿಗೆ ನೆನಪಾಯ್ತು. ಸಾಧಕನು ಸಹ್ಯಾಸಹ್ಯಗಳನ್ನು ಗೆಲ್ಲಬೇಕು ಎಂದು. ಅವರಿಗೆ ಹನುಮಣ್ಣನಲ್ಲಿ ಗುರುಭಾವನೆ.

"ಗುರುಗಳೇ, ನಾನು ನಿಮ್ಮ ಶಿಷ್ಯ. ಆ ಮಹಾನುಭಾವರ ಅಪ್ಪಣೆಯಂತೆ ಬಂದಿದ್ದೇನೆ. ನಾನು ಗುರುಗಳಲ್ಲ. ನಿಮ್ಮ ಶಿಷ್ಯ ಆನಂದ ಶಾಸ್ತ್ರಿ" ಎಂದರು ಶಾಸ್ತ್ರಿಗಳು.

ಹನುಮಣ್ಣ ವಿಚಿತ್ರವಾಗಿ ನಕ್ಕು 'ನಿನಗೆ ನಾನು ಗುರು. ನನಗೆ ನೀನು ಗುರು. ಹೋಗಲಿ, ಊಟ ಮಾಡಿದಿರಾ ಗುರುಗಳೇ?' ಎಂದ.

ಶಾಸ್ತ್ರಿಗಳ ಊಟವಾಗಿರಲಿಲ್ಲ. ಊರ ಪಕ್ಕದಕೆರೆಯಲ್ಲಿ ಸ್ನಾನ ಮಾಡಿ ಬಂದರು. ದೇವಸ್ಥಾನದ ಪಾಗರದಲ್ಲಿ ಅನ್ನ ಮಾಡಿಕೊಂಡರು. ಸೊಗಸಾಗಿ ಹಾಲು ಮೊಸರು ತಿಪ್ಪಣ್ಣ ತಂದು ಕೊಟ್ಟ. ನಂತರ ದೇವಸ್ಥಾನದಲ್ಲಿ ಕುಳಿತು ಇಬ್ಬರೂ ವಿಚಾರಕ್ಕೆ ತೊಡಗಿದರು.

ವಿಚಾರ ಎಂದರೇನು ಎನ್ನುವುದೊಂದು ಪ್ರಶ್ನೆ. ಅದನ್ನು ಹನುಮಣ್ಣ ಕೇಳಿದಾಗ ಗುಂಡಮಾವ ಹೇಳಿದ್ದು ನೆನಪಿಗೆ ಬರುತ್ತದೆ.

'ಚಾರ ಎಂದರೆ ಆಳು. ಮನಸ್ಸು ಇಂದ್ರಿಯಗಳ ಆಳು. ವಿ ಎಂದರೆ ವಿಪರೀತ. ಅಂದರೆ ಇಂದ್ರಿಯಗಳಿಗೆ ಮನಸ್ಸು ಯಜಮಾನನಾಗಿ ಅವಕ್ಕೆ ವಿರುದ್ಧವಾಗಿ ಆತ್ಮದ ಕಡೆಗೆ ತಿರುಗುವುದಕ್ಕೆ ಅನುಕೂಲವಾಗುವಂತಹ ಮಾತೇ ವಿಚಾರ'.

ಅಂದಿನಿಂದ ಹನುಮಣ್ಣ ಹೆಂಡ ಬಿಡುವುದಿರಲಿ ಊಟವನ್ನೇ ಬಿಟ್ಟು ಬಿಟ್ಟ. ಬೆಳಿಗ್ಗೆ ಎದ್ದು ಸ್ನಾನ ಮಾಡಿ, ಶಾಸ್ತ್ರಿಗಳ ಸ್ನಾನ ಅನುಷ್ಠಾನಗಳಿಗೆ ಅನುಕೂಲ ಮಾಡಿ ಕೊಟ್ಟು, ಅವರ ಸ್ವಯಂಪಾಕಕ್ಕೆ ಅಣಿ ಮಾಡಿಕೊಟ್ಟು, ಅವರು ಊಟ ಮಾಡುವಾಗ ಮನೆಗೆ ಹೋಗಿ ಹಾಲು ಕುಡಿದು ಬಂದನೆಂದರೆ ಮುಗಿಯಿತು. ಶಾಸ್ತ್ರಿಗಳಿಗೂ ಒಪ್ಪೊತ್ತೇ ಊಟ. ರಾತ್ರಿ ಒಂದು ಲೋಟ ಹಾಲು.

ಶಾಸ್ತ್ರಿಗಳು ಮೊದಲು ಹನುಮಣ್ಣನ್ನು ಒಂದು ಪ್ರಶ್ನೆ ಕೇಳುತ್ತಿದ್ದರು.

'ಉಪಾಸನೆ ಮಾಡುವುದು ಹೇಗೆ?'

ಅದಕ್ಕೆ ಹನುಮಣ್ಣ

'ಶಾಸ್ತ್ರ ಏನು ಹೇಳುತ್ತದೆ?' ಎಂದು ಮರುಪ್ರಶ್ನೆ ಹಾಕುತ್ತಿದ್ದ (ಏಕೆಂದರೆ ಅವನಿಗೆ ಉಪಾಸ (ಉಪವಾಸ) ಗೊತ್ತಿತ್ತೇ ಹೊರತು ಉಪಾಸನೆ ಎಂದರೇನು ಎಂಬುದು ತಿಳಿಯದು. ಆ ಶಬ್ದವನ್ನೇನೋ ಕೇಳಿದ್ದ)

ಶಾಸ್ತ್ರಿಗಳು ಶಾಸ್ತ್ರವನ್ನು ಹೇಳುತ್ತಿದ್ದರು. ಹಾಗೆ ಹೇಳುತ್ತಾ ಇಬ್ಬರ ಮನಸ್ಸು ಅದರಲ್ಲೇ ಮಗ್ನವಾಗಿ ಬಿಡುತ್ತಿತ್ತು.

'ಸೂರ್ಯ ಮೊದಲಾದ ಉಪಾಸ್ಯ ವಸ್ತುಗಳಲ್ಲಿ ಬ್ರಹ್ಮವೆಂಬ ಬುದ್ಧಿಯನ್ನಿಡಬೇಕು'. ಎನ್ನುವರು ಶಾಸ್ತ್ರಿಗಳು.

'ಸೂರ್ಯನೇ ಬ್ರಹ್ಮ ಅಂತ ತಿಳ್ಕಬುಕು ಅಲ್ಲೇ ಗುರುವೇ?' ಎನ್ನುವನು ಹನುಮಣ್ಣ.

'ತಾನೇ ಬ್ರಹ್ಮ ಎಂದು ಉಪಾಸನೆ ಮಾಡಿದರೆ?' ಹನುಮಣ್ಣ ಕೇಳುವನು.

'ಆಹಾ ಏನು ಅನುಭವದ ಮಾತು. ಆತ್ಮೇತಿಕೂಪ ಗಚ್ಛಂತಿ, ಗ್ರಾಹಯಂತಿಚ ಎಂದು ಭಗವಾನ್ ಬಾದರಾಯಣರು ವೇದಾಂತ ಸೂತ್ರಗಳಲ್ಲಿ ಅಪ್ಪಣೆ ಕೊಡಿಸಿದ್ದಾರೆ' ಎನ್ನುವರು ಶಾಸ್ತ್ರಿಗಳು.

'ಇದೆಲ್ಲಾ ಸಖ್ಖತ್ ಬ್ರಹ್ಮ' ಎನ್ನುವನು ಹನುಮಣ್ಣ.

'ಅಯಮಾತ್ಮಾಬ್ರಹ್ಮ' ಎಂದು ಶಾಸ್ತ್ರ , ಅಪ್ಪಣೆ ಕೊಡಿಸುತ್ತದೆ ಎನ್ನುವರು ಶಾಸ್ತ್ರಿಗಳು.

ಹೀಗೆ ಇಪ್ಪತ್ತೈದು ದಿನಗಳು ಕಳೆದವು. ಹಗಲೇನು ರಾತ್ರಿಯೇನು, ಊಟವೇನು ಉಪವಾಸವೇನು? ಹೀಗೆ ಮಾತನಾಡುತ್ತಾ ಇಬ್ಬರೂ ಒಮ್ಮೊಮ್ಮೆ ಗಂಟೆಗಟ್ಟಲೆ ಮೌನವಾಗಿ ಕುಳಿತು ಬಿಡುವರು. ಒಂದು ತಿಂಗಳು ಕಳೆದಿರಬಹುದು. ಹನುಮಣ್ಣನಿಗೆ ಕಾಯಿಲೆಯಾಯಿತು. ಶಾಸ್ತ್ರಿಗಳು ತಿಪ್ಪಣ್ಣ ಏನು ಹೇಳಿದರೂ, ಅವನು ವೈದ್ಯರ ಬಳಿಗೆ ಹೋಗಲಿಲ್ಲ. 'ಭವರೋಗ ವೈದ್ಯ, ನೀನು, ನನ್ಮನೆ ಬಾಗ್ಲಿಗೆ ಬಂದದಿ. ನಿನಗೆ ಉಪಚಾರ ಮಾಡೋ ಶಕ್ತಿ ಇಲ್ಲ. ಎಂಥಾ ಕರುಣೆ ನೀನು. ಕರುಣಾ ಸಮುದ್ರ' ಎಂದು ಹನುಮಣ್ಣ ಶಾಸ್ತ್ರಿಗಳಿಗೆ ಹೇಳುವನು.

'ನಾನು ಏನೂ ಅರಿಯದವನು. ಪುಸ್ತಕಗಳ ಹೊರೆ ಹೊತ್ತ ಗಾಡಿಯಿದ್ದ ಹಾಗೆ. ನಿಮ್ಮ ಅನುಭವ ವಾಕ್ಯಗಳಿಂದ ನನಗೀಗ ಸಂಶಯಗಳು ಮಾಯವಾಗುತ್ತಿವೆ' ಎಂದು ಶಾಸ್ತ್ರಿಗಳು ಹನುಮಣ್ಣನಿಗೆ ಹೇಳುವರು.

ಶಾಸ್ತ್ರಿಗಳು ನಮ್ಮ ಮನೆಗೆ ಬಂದ ಹಿಂದಿನ ದಿನ ಹನುಮಣ್ಣ ತೀರ ನಿಶ್ಶಕ್ತನಾಗಿದ್ದ. ಆದರೆ ಮಹಾ ಉತ್ಸಾಹದಿಂದಿದ್ದ ಶಾಸ್ತ್ರಿಗಳಿಗೆ ಪಾದಪೂಜೆ ಮಾಡಿದ.

ತೀರ್ಥ ಪ್ರಸಾದ ಸ್ವೀಕರಿಸಿದ.

ಇದ್ದಕ್ಕಿದ್ದ ಹಾಗೆ ಅವನು

"ಶಾಸ್ತ್ರಿಗಳೇ ಯಾವಾಗ ಬಂದಿರಿ" ಎಂದು ಕೇಳಿದ.

"ಸ್ವಾಮಿ, ನಿಮ್ಮ ಸನ್ನಿಧಿಗೆ ನಾನು ಬಂದು ಒಂದು ತಿಂಗಳ ಮೇಲಾಯಿತು" ಎಂದರು.

"ಎಲ್ಲಿ ಅದಿರಿ, ಹೆಂಗದಿರಿ" ಎಂದು ಕೇಳಿದ.

ಶಾಸ್ತ್ರಿಗಳು ತಮ್ಮ ವಿಷಯ ತಿಳಿಸಿದರು. ಅದ್ನನು ಕೇಳಿ ಹನುಮಣ್ಣ

"ಎಲ್ಲಾ ಗುರುವಿನ ಆಟ. ನಿಮ್ಮ ರೂಪದಲ್ಲಿ ಬಂದು ಅನುಗ್ರಹ ಮಾಡಿದ. ನಿಮಗೂ ಅನುಭವ ಬರುವ ಕಾಲ ಹತ್ತಿರವಾಗಿದೆ. ನಿಮಗೆ ನಾನು ನನ್ನ ಮಗ, ಏನು ಅಪಚಾರ ಮಾಡಿದೆವೋ ಏನೋ! ಹೋಗಲಿ ಎಲ್ಲವೂ ಆತ್ಮನಾದಾಗ ಎಲ್ಲಿಯ ಉಪಚಾರ ಅಪಚಾರ. ಈದಿನ ಸಂಜೆ ನಾನು ದೇಹ ಬಿಡುತ್ತೇನೆ. ನನ್ನ ದೇಹದ ಸಂಸ್ಕಾರವಾದ ಮೇಲೆ ನಮ್ಮ ಸ್ವಾಮೇರನ್ನು ನೋಡಿ, ಆಮ್ಯಾಲೆ ನಿಮ್ಮ ಊರಿಗೆ ಹೋಗಿರಿ" ಎಂದ.

ಅಂದೇ ಸಂಜೆ ಹನುಮಣ್ಣ ನಿಧನ ಹೊಂದಿದ. ಅವನ ದೇಹದ ಸಂಸ್ಕಾರ ಮುಗಿಸಿ ಶಾಸ್ತ್ರಿಗಳು ನಮ್ಮೂರಿಗೆ ಬಂದಿದ್ದರು.

ಶಾಸ್ತ್ರಿಗಳು ನಮ್ಮ ಮನೆಯಲ್ಲಿ ಎರಡು ದಿನ ಇದ್ದು ತಮ್ಮ ಊರಿಗೆ ಹಿಂದಿರುಗಿದರು.

ಹೋಗುವ ಮೊದಲು

'ಇದೇನು ವಿಚಿತ್ರ' ಎಂದು ಕೇಳಿದರು.

"ಹಿರಿಯರು ಹೇಳುತ್ತಾರೆ. ಇದೆಲ್ಲಾ ಸಂಸ್ಕಾರ ವಿಶೇಷ. ರೈಕ್ವ ಗಾಡಿಯ ಕೆಳಗೆ ಕುಳಿತು ಕಜ್ಜಿಯನ್ನು ಕೆರೆಯುತ್ತಿರಲಿಲ್ಲವೇ? ಅವನ ಬಳಿ ಮಹಾಗೃಹಸ್ಥರು ಹೋಗಲಿಲ್ಲವೇ? ಹಾಗೆಯೆ ಇದೂ" ಎಂದೆ.

'ಬ್ರಹ್ಮ ವಿಚಾರ ಮಾಡುತ್ತಾ ಹೀಗೆ ದೇಹವನ್ನು ಬಿಡುವುದು ಜ್ಞಾನಿಗಳ ಲಕ್ಷಣ' ಎಂದರು ಶಾಸ್ತ್ರಿಗಳು.

ನಾನು 'ಈ ಜಗತ್ತು ವಿಷ್ಣು ಮಾಯಾ ವಿಲಾಸ. ಆತ್ಮ ಜ್ಞಾನಿ ಮಾತ್ರಾ ಇದನ್ನು ಬಲ್ಲ. ಗುರುಗಳು ಎಂತಹ ಆಟ ಆಡಿದರು ನೋಡಿ' ಎಂದೆ.

# ಅಂಡಮಾನೋ ಬಡ್ತಿಯೋ?

ಎಂ.ಪಿ. ಮನೋಹರಚಂದ್ರನ್

ನಮ್ಮ ಸಿದ್ದಪ್ಪನ್ನ ನೀವು ಸುಲಭವಾಗಿ ಗುರ್ತಿಸಬಹುದು – ತಲೆಯಿಂದ ಮಟ ಮಟ ಮಧ್ಯಾಹ್ನದ ವೇಳೆ ನಿಮಗೆ ಸಿದ್ದಪ್ಪ ಕಾಣೋದೇ ಇಲ್ಲ. ಕಾಣಿಸಬೇಕಾದ್ರೆ ನೀವು ತಂಪು ಕನ್ನಡಕ ಹಾಕಿಕೊಳ್ಳಬೇಕಾಗುತ್ತೆ. ಅರ್ಥ ಆಯ್ತಲ್ಲ? ಬಿಸಿಲಿನ ಝಳಕ್ಕೆ ಅಷ್ಟು ಮಿಂಚ್ತಿರುತ್ತೆ ಅವನ ತಲೆ! ಆಫೀಸ್ನಲ್ಲಿ ಈ ನಮ್ಮ ಸಿದ್ಧಪ್ಪನಿಗೆ ಎರಡೇ ಕೆಲಸ. ಮೊದಲನೆಯದು ತನಗೆ ಬಡ್ತಿ ಸಿಗಬೇಕಾದ್ರೆ ಜೇಷ್ಠತಾ ಪಟ್ಟಿಯಲ್ಲಿ ತನ್ನ ಮೇಲೆ ಇನ್ನೂ ಎಷ್ಟು ಜನ ಇದ್ದಾರೆ ಎಂದು ಲೆಕ್ಕ ಹಾಕೋದು. ಅಂಥ ಮಹತ್ಕಾರ್ಯದಲ್ಲಿ ತೊಡಗಿದ್ದಾಗ ಸಿದ್ಧಪ್ಪನ ಕೈಯಲ್ಲಿ ಯಾವಾಗ್ಲೂ ಒಂದು ಕೆಂಪು ಪೆನ್ಸಿಲ್ ಇರುತ್ತೆ. ಯಾರಾದ್ರೂ ಸತ್ತು ಹೋಗಿದ್ರೆ ಅವರ ಹೆಸರನ್ನು ಪಟ್ಟಿಯಿಂದ ತೆಗೆದುಹಾಕಬೇಕಲ್ಲ! ಎರಡನೆಯ ಕೆಲಸ ಎಂದರೆ ಕುರ್ಚಿಯಲ್ಲೇ ಹಿಂದಕ್ಕೆ ಒರಗಿ ಗೊರಕೆ ಹೊಡೆಯುತ್ತಾ ನಿದ್ದೆ ಮಾಡೋದು.

ನಿಮಗೆ ಗೊತ್ತೆ? ಹೀಗೆ ಗೊರಕೆ ಹೊಡೆದು ನಿದ್ದೆ ಮಾಡುವ ಸಿದ್ಧಪ್ಪನಿಗೆ ನಮ್ಮ ಬಾಸ್ ಒಂದು ಇಂಕ್ರಿಮೆಂಟನ್ನು ಕೊಟ್ಟು ಅವನ ಸಂಬಳವನ್ನು ಹೆಚ್ಚು ಮಾಡಿದರು. ಏಕೆ ಗೊತ್ತೆ? ಅವನ ಗೊರಕೆಯ ಕೊರೆತಕ್ಕೆ ಉಳಿದವರು ನಿದ್ದೆ ಮಾಡುವುದು ಸಾಧ್ಯವಿಲ್ಲದ್ದರಿಂದ ಅವರೆಲ್ಲ ಎಚ್ಚರವಿದ್ದು ಕೆಲಸ ಮಾಡಲೇ ಬೇಕಾದ ಕಾರಣ ಆಫೀಸಿನ ಕಾರ್ಯಕ್ಷಮತೆ ಹೆಚ್ಚಿದೆ. ಇದು ನಮ್ಮ ಬಾಸ್‌ನ ಅಭಿಪ್ರಾಯ. ನೀವು ಈ ನನ್ನ ಮಾತನ್ನು ನಂಬುವುದಿಲ್ಲವೆ? ನನಗೆ ಇದೇ ಆಶ್ಚರ್ಯ. ನಾನೊಬ್ಬ ಮಹಾ ಸುಳ್ಳುಗಾರ ಎಂದು ಅದು ಹೇಗೆ ಎಲ್ಲರಿಗೂ ತಿಳಿದು ಬಿಡುತ್ತದೆ!

ಸಿದ್ದಪ್ಪ ನನ್ನ ಟೇಬಲ್ಲಿಗೆ ಬಂದ. ಅವನ ಕೈಯಲ್ಲಿ ಜೇಷ್ಠತಾ ಪಟ್ಟಿ ಇತ್ತು. ನೋಡು ಎಂದ. ನೋಡಿದೆ. ಕೆಂಪು ಪೆನ್ಸಿಲ್ಲಿನಿಂದ ರಾಮಣ್ಣನ ಹೆಸರನ್ನು ಹೊಡೆದು ಹಾಕಿದ್ದ. ನಾನು ಸಿದ್ದಪ್ಪನ ಮುಖ ನೋಡಿದೆ.

“ನಂಗೊತ್ತು ನೀನೇನ್ ಕೇಳ್ತೀಯಾಂತ. ಅಪಘಾತ ಆಗಿ ಆಸ್ಪತ್ರೆ ಸೇರಿದ್ದ ರಾಮಣ್ಣ ಮೊನ್ನೆ ಪಾಪ! ಸತ್ನಂತೆ”.

ಸಿದ್ದಪ್ಪನ ಧ್ವನಿಯಲ್ಲಿ ಅಂಥ ದುಃಖವೇನೂ ಇರಲಿಲ್ಲ. ಅವನು ಮಹಾ ವಾಸ್ತವವಾದಿ. ರಾಮಣ್ಣನಿಗೂ ಈ ಆಫೀಸಿಗೂ ಇನ್ನು ಸಂಬಂಧ ಇಲ್ಲ. ಅಷ್ಟೆ ಅವನ ಅಭಿಪ್ರಾಯ.

“ನಿಂಗೆ ಬಡ್ತಿ ಸಿಗಬೇಕಾದ್ರೆ ನಾನು ನೆಗೆದು ಬೀಳ್ಬೇಕು” ಎಂದೆ.

"ನೀನಿನ್ನು ಬದುಕೇ ಇದೀಯಲ್ಲ" ಎಂದ ಸಿದ್ದಪ್ಪ. ನಾನು ಹೇಳಿದೆನಲ್ಲ. ಅವನು ಮಹಾ ವಾಸ್ತವವಾದಿ. ಛೇ!ಛೇ! ಎಂಥ ಮಾತ್ನಾಡ್ತೀಯೋ? ಅಂತ ಅವನ ಬಾಯಲ್ಲಿ ಬರೋದಕ್ಕೆ ಸಾಧ್ಯವೇ ಇಲ್ಲ. ಅಯ್ಯೋ ಇವನು ಬದುಕಿದ್ದಾನೆ, ನಂಗೆ ಬಡ್ತಿ ಸಿಗಲ್ವೆ ಅಂತ ಕರುಬುವ ವ್ಯಕ್ತಿಯೂ ಅಲ್ಲ. ನಾನು ನೆಗೆದುಬಿದ್ದೆ ಎಂದು ತಿಳಿದ ಕ್ಷಣವೇ ಕೆಂಪು ಪೆನ್ಸಿಲಿನಿಂದ ನನ್ನ ಹೆಸರನ್ನು ಕಾಟು ಹಾಕುವುದಕ್ಕೆ ತಡಮಾಡುವವನಲ್ಲ!

'ಅಲ್ಲ ಸಿದ್ಧಣ್ಣ, ಗೊರಕೆ ಹೊಡೆಯೋ ಸಮಯ ನಿಂದು. ಯಾಕೆ ಬಂದಿದ್ದು?" ಎಂದೆ.

ಸಿದ್ದಪ್ಪ ತನ್ನ ಮೂತಿಯನ್ನು ನನ್ನ ಕಿವಿಯ ಬಳಿ ತಂದು ಉಸುರಿದ

"ಈಗ ಬಾಸ್ ನಿಂಗೆ ಇಲ್ಲದಿದ್ರೆ ರಾಜಣ್ಣನಿಗೆ ಬಡ್ತಿ ಕೊಡ್ಬೇಕಾಗುತ್ತೆ. ರಾಜಣ್ಣ ಒಳ್ಳೇ ಕೆಲಸಗಾರ ಅಂತ ನಮ್ಗೂ ಗೊತ್ತು. ಸಾಹೇಬ್ರಿಗೂ ಗೊತ್ತು. ಇನ್ನು ನೀನು? ...... ಸಾಹೇಬ್ರೇ ಎಲ್ಲರ ಎದ್ರು ಮೊನ್ನೇನೆ ನಿಂಗೇ ಹೇಳಿದ್ರಲ್ಲ ಈ ಆಫೀಸನ್ನಲ್ಲಿರೋರ ಪೈಕೀನೇ ಅತಿ ಸೋಮಾರಿ ಎಂದು. ನಿಂದೂ ಒಂಥರಾ ಕೀರ್ತಿ! ಬಡ್ತಿ ಸಿಗೋ ಸಮಯ. ಈಗ್ಲೂ ಸೋಮಾರಿ ಆಗಿ ಇರ್ಬೇಡ ಅಂತ ಹೇಳೋಕೆ ಬಂದೆ. ಸ್ವಲ್ಪ ಚುರುಕಾಗು".



"ಆಯ್ತು ಸಿದ್ದಣ್ಣ. ನಿನ್ನ ಸಲುವಾಗಿ ಚುರಕಾಗ್ತೀನಿ. ಏಕೆಂದ್ರೆ ನಂಗೆ ಬಡ್ತಿ ಸಿಗದಿದ್ರೆ ಮುಂದೆ ನಿಂಗೆ ಸಿಗೋದು ಕಷ್ಟ ಅಲ್ವ? ಎಂದೆ ನಗುತ್ತಾ

"ನಿಂಗೆ ಜವಾಬ್ದಾರಿನೇ ಇಲ್ಲ" ಎಂದು ಸಿದ್ದಪ್ಪ ಮೂತಿಯನ್ನು ಇನ್ನಷ್ಟು ಉದ್ದಮಾಡಿಕೊಂಡು ತನ್ನ ಟೇಬಲಿಗೆ ಹೋದ.

ಮಾರನೆಯದಿನ ನಾನೇ ಸಿದ್ದಪ್ಪನ ಟೇಬಲಿಗೆ ಹೋದೆ

"ಸಿದ್ದಣ್ಣ, ನೀನು ಹೇಳಿದ ಹಾಗೆ ಚುರುಕಾದೆ. ತಲೆ ಓಡಿಸಿ ಒಂದು ಘನಂದಾರಿ ಕೆಲ್ಸ ಮಾಡಿದೀನಿ" ಎಂದೆ.

"ಏನ್ ಮಾಡಿದ್ಯೋ?" ಎಂದ ಸಿದ್ದಪ್ಪ

"ನೆನ್ನೆ ಸಾಹೇಬ್ರಿಗೆ ಒಂದು ಪ್ರೆಸೆಂಟೇಷನ್ ಕಳುಹಿಸಿದೀನಿ. ಸಂಜೆ ಆಫೀಸ್ ಮುಗಿದ್ಮೇಲೆ ಜವಾನ್ ರಂಗನ್ನೂ ಕರ್ಕೊಂಡ್ ಹೋಗಿದ್ದೆ. ಅವನ ಮೂಲಕ ಅದನ್ನ ಸಾಹೇಬರ ಮನೆಗೆ ಕಳುಹಿಸಿದೀನಿ ಗೊತ್ತಾ?" ಎಂದು ಹೆಮ್ಮೆಯಿಂದ ಹಲ್ಕಿರಿದೆ.

"ಅಯ್ಯೋ ಶಿವನೆ!" ಎಂದ ಸಿದ್ದಪ್ಪ. ಹಣೆ ಹಣೆ ಚೆಚ್ಚಿಕೊಳ್ಳಬೇಕೆಂದಿದ್ದವನು ಜನ ಸೇರುತ್ತಾರೆಂದು ಸುಮ್ಮನಾದ.

"ಲಂಚ ಅಂದ್ರೆ ಸಾಕು ಸಾಹೇಬ್ರು ಮಡಿ ಆಚಾರ್ರ ಹಾಗೆ ಗಾವುದ ದೂರ ಹಾರ್ತಾರೆ. ನಿಂಗೇನು ಬಂತೋ ಕೇಡು ಬುದ್ದಿ?" ಎಂದ.

"ಅಲ್ಲ ಸಿದ್ದಣ್ಣ, ನೀನು ಹೇಳಿದ್ಮೇಲೆ ವಿಚಾರ ಮಾಡ್ದೆ. ಆಫೀಸ್ ಮುಗಿದ್ಮೇಲೆ ಗಾಂಧಿ ಬಜಾರ್ನಲ್ಲಿ ನಡೀದಿದ್ದೆ. ರಸ್ತೇಲಿ ಪುಟ್ಟ ಪುಟ್ಟ ವಿಗ್ರಹಗಳನ್ನ ಮಾರ್ತಿದ್ರು. ಬುದ್ದನ ವಿಗ್ರಹ ಆರ್ಸಿ ಅವರ್ಗೆ ಪ್ರೆಸೆಂಟ್ ಮಾಡಿದೀನಿ. ಹೇಗಿದೆ ತನ್ನ ಬುದ್ಧಿ" ಎಂದೆ.

"ಅಯ್ಯೋ ದುಲ್ಬ ನನ್ಮಗನೆ" ಎಂದ "ರಸ್ತೇಲಿ ಮಾರ್ತಿದ್ರ?" ಎಂದ

ಹೂಂ ಎಂದೆ

"ಎಷ್ಟು ಕೊಟ್ಟೆ?"

"ಹತ್ತು ರೂಪಾಯಿ"

"ಎಷ್ಟು? ಎಷ್ಟಂದೆ?"

"ಹತ್ತು ರೂಪಾಯಿ ಸಿದ್ದಣ್ಣ. ಹದಿನೈದು ಹೇಳ್ದ ಹತ್ತು ಕೇಳ್ದೆ ಕೊಟ್ಟು ಬಿಟ್ಟ. ಇನ್ನೂ ಕಡಿಮೆ ಕೇಳ್ಬೇಕಾಗಿತ್ತು ಅಂತ ಆಮೇಲೆ ಅನ್ನಿಸ್ತು"

"ಐದು ರೂಪಾಯ್ಗೆ ಕೇಳಿದ್ರು ಕೊಡ್ತಿದ್ನೊ. ಕಡಿಮೆ ಬೆಲೆಯ ಕಚಡಾ ವಸ್ತುವನ್ನು ಪ್ರೆಸೆಂಟೇಷನ್ ಅಂತ ಅವರ ಮನೆಗೆ ಕಳುಹಿಸಿದೀಯಲ್ಲ. ನಿನ್ನ ಚುರುಕು ಬುದ್ಧಿಗೆ ಎಷ್ಟು ಹೊಗಳ್ಬೇಕು!"

ಲಂಚ ಅಂದ್ರೆ ಯಾವುದೇ ರೂಪದಲ್ಲಿದ್ರೂ ದ್ವೇಷ ಮಾಡೋ ಮನುಷ್ಯ ಆತ. ಆತಂಗೆ ಹತ್ತು ರೂಪಾಯಿ ಪ್ರೆಸೆಂಟೇಷನ್! ನೀನು ಒಂದು ಕೆಲಸ ಮಾಡು'' ಎಂದ ಸಿದ್ದಪ್ಪ

''ಹೇಳು ಸಿದ್ದಣ್ಣ'' ಎಂದೆ

''ರಜ ಹಾಕಿ ಮನೆಗೆ ಹೋಗಿ ಎಲ್ಲ ಸಾಮಾನು ಕಟ್ಟು. ಅಂಡಮಾನ್‌ನಲ್ಲಿ ನಮ್ದು ಒಂದು ಆಫೀಸಿದೆ. ಅಲ್ಲಿಗೆ ಖಂಡಿತ ಬಾಸ್ ನಿಂಗೆ ವರ್ಗ ಮಾಡ್ತಾರೆ'' ಎಂದ.

''ಹಾಗಂತೀಯಾ ಸಿದ್ದಣ್ಣ'' ಎಂದೆ

''ಖಂಡಿತ ಅಂದ್ರೆ ಖಂಡಿತ. ಅಲ್ನೋಡು ಜವಾನ ರಂಗ ನಿನ್ಕಡೇನೆ ಬರ್ತಿದಾನೆ'', ಸಿದ್ದಪ್ಪ ಹೇಳಿದಂತೆ ರಂಗ ಬಂದ ''ಸಾರ್ ಸಾಹೇಬ್ರು ಕರೀತಿದಾರೆ'' ಎಂದ.

''ಏನ್ ಆಗ್ಬಹುದು ಸಿದ್ದಣ್ಣ?'' ಎಂದೆ

''ನಿನ್ನ ತಿಥಿ. ಅನುಭವಿಸು ಹೋಗು'' ಎಂದ. ಸಿದ್ದಪ್ಪ ಮಹಾ ವಾಸ್ತವವಾದಿ ಅಂತ ಮೊದಲೇ ಹೇಳಿದ್ದೆನಲ್ಲ. ಇರೋ ವಿಷಯವನ್ನ ಮುಲಾಜು ಇಟ್ಟುಕೊಳ್ಳದೆ ಹೇಳಿಬಿಡ್ತಾನೆ.

ಬಾಸ್‌ನ ಕೊಠಡಿಯಲ್ಲಿ ನಾನು ಅರ್ಧ ಗಂಟೆ ಇರಬಹುದು. ನಾನು ಹೊರಗೆ ಬಂದಾಗ ಸಿದ್ದಣ್ಣ ಸಿನಿಮಾದಲ್ಲಿನ ಕ್ಲೈಮಾಕ್ಸ್ ದೃಶ್ಯವನ್ನು ತಪ್ಪಿಸಿಕೊಂಡವನಂತೆ ಒದ್ದಾಡುತ್ತಿದ್ದ.

''ಏನಾಯ್ತೋ?'' ಎಂದೆ

ನಾನು ಅವನ ಕೈಗೆ ಸಾಹೇಬರು ಕೊಟ್ಟಿದ್ದ ಬಡ್ತಿ ಆರ್ಡರ್ ಕೊಟ್ಟೆ. ಸಿದ್ದಪ್ಪ ಇಷ್ಟಗಲ ಅಂದರೆ ಒಂದು ಇಡೀ ಆನೆ ಅವನ ಬಾಯಿಯೊಳಗೆ ಹೋಗಿ ಬರುವಷ್ಟು ತೆಗೆದಿದ್ದ. ಅವನಿಗೆ ಶಾಕ್ ಆಗಿ ನೆಗೆದು ಬಿದ್ದರೇನು ಗತಿ? ಕೆಂಪು ಪೆನ್ಸಿಲಿನಿಂದ ಅವನ ಹೆಸರನ್ನು ಜೇಷ್ಠತಾ ಪಟ್ಟಿಯಲ್ಲಿ ಕಾಟು ಹಾಕಬೇಕಾಗುತ್ತದೆ.

''ಸಿದ್ದಣ್ಣ, ಸಿದ್ದಣ್ಣ, ತಗೋ ಈ ಲೋಟದಲ್ಲಿ ನೀರಿದೆ. ಕುಡಿ'' ಎಂದೆ.

ಅವನು ಗಟ ಗಟ ಕುಡಿದು ಸುಧಾರಿಸಿಕೊಂಡು ಸಮಾಧಾನದ ಸ್ಥಿತಿಗೆ ಬರಲು ಮೂವತ್ತು ನಿಮಿಷಗಳನ್ನು ತೆಗೆದುಕೊಂಡ. ಕೊನೆಗೆ

"ಇದು ಹೇಗೆ ಸಾಧ್ಯವೋ?" ಎಂದ "ರಾಜಣ್ಣಂಗೆ ಬಡ್ತಿ ಕೊಟ್ಟಿಲ್ಲ" ಎಂದ

"ಸಮಾಧಾನ ತಂದ್ಕೊ ಸಿದ್ದಣ್ಣ. ಎಲ್ಲ ದೇವರ ಪವಾಡ. ನಂಗೂ ಅರ್ಥ ಆಗಿಲ್ಲ.

ರಾಜಣ್ಣಂಗೆ, ನೀನು ನಂಬ್ತಿಯೋ ಇಲ್ವೊ, ಅಂಡಮಾನ್ ಆಫೀಸ್ಗೆ ವರ್ಗ ಅಗಿದೆ. ಬಡ್ತೀನೂ ಕೊಟ್ಟಿಲ್ಲ" ಎಂದೆ.

"ಇದು ಹೇಗೆ ಸಾಧ್ಯವೋ?" ಎಂದು ಪುನಃ ಸಿದ್ದಪ್ಪ ಕೇಳಿದ.

ಈ ವಾಸ್ತವವಾದಿಗೆ ನಾನು ವಾಸ್ತವ ಸಂಗತಿಯನ್ನು ಹೇಗೆ ಹೇಳಲಿ? ಕಡಿಮೆ ಬೆಲೆಯ ಕಚಡಾ ವಸ್ತುವನ್ನು ರಾಜಣ್ಣನ ಹೆಸರಿನಲ್ಲಿ ಸಾಹೇಬರಿಗೆ ಪ್ರೆಸೆಂಟೇಷನ್ ಕಳುಹಿಸಿದ್ದೆ ಎಂಬುದನ್ನು ಬಹಿರಂಗ ಪಡಿಸಿದರೆ ನಾನೂ ಅಂಡಮಾನಿಗೆ ಹೋಗುವುದಿಲ್ಲವೆ?

---



"ಇಲ್ಲ! ಇದು ನಂ ಮನೇಲೇ ಆದದ್ದು!!"

# "ಹೋಯ್! ಮತ್ತೇನು ವಿಶೇಷ?"

**ಟಿ.ಎಸ್. ಅಂಬುಜ**

ಮಾರ್ಕೆಟ್‌ನಲ್ಲೋ, ಬಸ್‌ಸ್ಟಾಪಲ್ಲೋ ನಿಮ್ಮೆದುರು ಧುತ್ತೆಂದು ಬಂದು ನಿಂತ ವ್ಯಕ್ತಿಯೊಬ್ಬರಿಂದ, ನೀವು ಮೇಲಿನ (ಶೀರ್ಷಿಕೆಯ) ಪ್ರಶ್ನೆ ಎದುರಿಸಬೇಕಾಯ್ತೆಂದುಕೊಳ್ಳಿ. ಒಳಗುಟ್ಟೆಂದರೆ, ನಿಮಗೆ ಆತ (ಆಕೆ)ನನ್ನು ಎಲ್ಲೋ ನೋಡಿದಂತಿರುತ್ತದೆಯಾದರೂ ಆ ಪರಿಚಯದ ಸ್ಪಷ್ಟ ವಿವರವನ್ನಿನ್ನೂ ತಮ್ಮ ಮಿದುಳು ಅರುಹುತ್ತಿಲ್ಲ. ಆ ವ್ಯಕ್ತಿಯಾದ್ರೂ, "ನನ್ ಗುರ್ತು ಸಿಕ್ತಾ?" ಎಂದೋ, "ನಾನ್ಯಾರು ಗೊತ್ತಾಯ್ತಾ?" ಎಂದೋ, ಕೇಳೀದ್ದರಾದ್ರ, ಮುಖ ಮೇಲೆತ್ತಿ, ಬರೆಗಣ್ಣು ಮಾಡ್ಕೊಂಡು, ನೆನಪಿಸಿಕೊಳ್ಳುತ್ತಿರುವಂತೆ ನಟಿಸಿದ್ರೂ ಸಾಕು... ತಾನೇ, "ಮರ್ತ್ಹೋಯ್ತ? ಮೊನ್ನೆ ಸಾರ್ವಜನಿಕ ಗಣೇಶೋತ್ಸವದ ನೃತ್ಯ ಕಾರ್ಯಕ್ರಮದಲ್ಲಿ ಒಟ್ಟಿಗೇ ಕೂತು ಮಾತಾಡಿದ್ವಲ್ಲಾ...?" ಎಂದೋ, "ಮತ್ತೆ... ನಿಮ್ಮ ಮಗ್ಳ ಸ್ಕೂಲ್‌ಮೇಟ್ ಅಲ್ವಾ ನನ್ ಮಗ್ಳು? ಆವತ್ತು ಸ್ಕೂಲಲ್ಲಿ ಹೆಡ್‌ಮಿಸೆಸ್ ರೂಂ ಹೊರಗೆ ಕಾಯ್ತಿದ್ದಾಗ ಮಾತಾಡಿರ್ಲಿಲ್ವಾ" ಎಂದೋ, ಜ್ಞಾಪಿಸಿರ್ತಿದ್ದರು. ಆದ್ರೆ, ಈ ವ್ಯಕ್ತಿಯೋ, ತಾನು ನಿಮ್ಮ ಸ್ವಂತ ಅಣ್ಣ(ಕ್ಕ)ನೋ, ಮಾವನೋ, ಚಿಕ್ಕಪ್ಪನೋ ಎಂಬಂತೆ ಆತ್ಮೀಯವಾಗಿ ವಿಚಾರಿಸುತ್ತಿರುವಾಗ "ನಿಮ್ ಪರಿಚಯ ಆಗ್ತಿಲ್ವೆ? ನೀವ್ ಯಾರ್ ಮಾರಾಯ್ರೇ?" ಎನ್ನುವಷ್ಟು ಹೆಡ್ಡರು ತಾವಲ್ಲವೆನ್ನುವುದಕ್ಕೆ ಈ ಬರಹವನ್ನೋದುತ್ತಿರುವಿರೆಂಬುದೇ ಪರಮ ಸಾಕ್ಷಿಯಲ್ಲವೆ?

ನನ್ನ ಗೆಳತಿಯೊಬ್ಬಳ ದೊಡ್ಡಪ್ಪ, ಆ ಕಾಲೇಜಿನ ಆದರಣೀಯ, ಜನಪ್ರಿಯ ಪ್ರೊಫೆಸರರು. ಈಗ ಎಲ್ಲೆಲ್ಲೋ ಜೀವನ ದಾರಿ ಹಿಡಿದು ಚದುರಿ ಹೋಗಿರುವ ಅವರ ಶಿಷ್ಯರುಗಳೆಲ್ಲರೂ ಅವರು ಎಲ್ಲೇ ಸಿಕ್ಕಲಿ, ಮಾತಾಡಿಸುವವರೇ. ಅವರುಗಳಿಗೆಲ್ಲ, ತಮ್ಮ ಮೆಚ್ಚಿನ ಗುರುಗಳೊಡನೆ ಸಂವಾದವೆಂದರೆ, ಅದೇನೋ ಧನ್ಯತಾ ಭಾವ. ಇವರೋ, ಗಾದೆ ಮಾತಿನಂತೆ, ಹೇಳಿ ಕೇಳಿ 'ಮರೆಗುಳಿ' ಉಪನ್ಯಾಸಕರು. ಆದ್ರು, ಸರಳ ಮನಸ್ಸಿನ ಆತ, ನಗುಮೊಗದ ಮೃದುಭಾಷಿಯೂ ನಿಜ.

ಆಗ, ಪರ ಊರಿನಲ್ಲಿದ್ದ ನನ್ನ ಗೆಳತಿ, ಪತಿಯ ಜತೆ ಊರಿಗೆ ಬಂದಿದ್ದಳು. ಆಕೆಯ ತೌರಿಂದ ತುಸು ದೂರದಲ್ಲಿರುವ ಆತನ ಮನೆಗೆ ಹೋಗಬೇಕೆಂದುಕೊಂಡಿದ್ದಳಾದರೂ, ಅಂದು ಇನ್ನಾರಲ್ಲಿಗೋ ಹೋಗಿ ಹಿಂದಿರುಗುತ್ತಿರುವಾಗ, ದಾರಿಯಲ್ಲೇ 'ದೊಡ್ಡಪ್ಪ' ಎದುರಾದರು, ಅವಳ ಪತಿಯೂ ಮಾತುಗಾರರೇ ಆದ್ದರಿಂದ, "ಹೇಗಿದ್ದೀರಿ? ನಾವು ಮೊನ್ನೆಯೇ ಮದ್ರಾಸ್‌ನಿಂದ

ಬಂದೆವು. ನಿಮ್ಮನೆಗೆ ಬಂದು ಭೆಟ್ಟಿಯಾಗ್ಬೇಕು ಅಂತ್ಲೇ ಇದ್ದೆವು. ಕಾಲೇಜಿಂದ ಹಿಂದಿರುಗ್ತಿದೀರೇನೋ? ಮತ್ತೇನ ವಿಶೇಷ? ಇತ್ಯಾದಿ ಹರಟುತ್ತಿದ್ದಂತೇ, ಪ್ರೊಫೆಸರ್ರಗೋ, 'ಬಿಲ್‌ಕುಲ್' ಆತನ ಗುರ್ತು ಅಗ್ತಿಲ್ಲ. ಆದರೂ... ಯಾರೋ ಮದ್ರಾಸಲ್ಲಿರುವ ತನ್ನ ಹಳೆಯ ಶಿಷ್ಯ ಎಂದುಕೊಂಡು "ಓ! ನೀವೆಲ್ಲ ಚೆನ್ನಾಗಿದೀರಾಪ್ಪಾ? ಸ್ವಲ್ಪ ದಿವ್ಸ ಇರ್ತೀರಾ ಊರಲ್ಲಿ? ಅಥ್ವಾ ಬೇಗ ಹಿಂದಿರುಗ್ಬೇಕಾ? ಮನೇಲೆಲ್ಲಾ ಸೌಖ್ಯವಾ? ಇನ್ಯಾವಾಗ ಪುನಃ ಊರಿಗೆ?" ಇತ್ಯಾದಿ ಸರ್ವಕಾಲಿಕ, ಸಾರ್ವತ್ರಿಕ, ಸರ್ವಾನ್ವಯವೆನಿಸುವ ಸಂಭಾಷಣೆ ಆರಂಭಿಸಿದರು. ಜತೆಗೆ, ಗಂಡನ ಒಂದು ಮಾತಿಗೆ ಹತ್ತು ವಿವರಣೆ ನೀಡುತ್ತ ಬಡಬಡಿಸುತ್ತಿರುವ ಈ ಮಹಿಳೆಯನ್ನು ತಾನು ಮಾತಾಡಿಸದಿದ್ದರೆ ಸರಿಯಾಗದೆನಿಸಿತೇನೋ? (ಇಂದಿನ, ದೊಡ್ಡ ತುರುಬಿನ, ಸ್ಥೂಲದೇಹದ, ಗೋಲ ಕುಂಕುಮದ ಈ ಹೆಂಗಸು, ತನ್ನ ತಮ್ಮನ ಮಗಳು ಎಂಬುದನ್ನು ಕಲ್ಪಿಸಲು ಆಕೆಯ ಅಂದಿನ, ಬಳುಕುವ ಕೋಲು ಶರೀರ, ಸಡಿಲ ಜಡೆ, ಸಣ್ಣ ಚುಕ್ಕಿಯ ಹಣೆಯ ನೆನಪುಗಳು, ಅಡ್ಡಗಾಲೊಡ್ಡರಬೇಕು!) ಕೇಳಿಯೇಬಿಟ್ಟರು. "ಏನಮ್ಮಾ.... ಮಕ್ಳು ಯಾವ್ ಯಾವ್ ಕ್ಲಾಸಲ್ಲಿದ್ದಾರೆ? ಹೇಗಿದ್ದಾರೆ ಸ್ಟಡೀಸ್‌ನಲ್ಲಿ?"

ಇವಳಿಗೆ ದೊಡ್ಡಪ್ಪನ 'ಅಂದಾಜಿನ ಮೇಲಿನ ಗುಂಡಿ'ನ ಸುಳಿವು ಹತ್ತಿದ್ದೆ, ಈಗ! ಯಾಕೆಂದರೆ ಆಕೆಗಿನ್ನೂ ಮಕ್ಕಳಾಗಿಲ್ಲವೆನ್ನುವುದು, ಅವರಿಗೂ ಖಂಡಿತಾ ಗೊತ್ತು! "ಎಂತ ದೊಡ್ಡಪ್ಪಯ್ಯಾ, ನಾನ್ ಸುಬ್ಬಿ ಅಲ್ವಾ?" ಎಂದೊಡನೆ ಪೆಚ್ಚಾದರೂ, ನಗುತ್ತ, "ಅಯ್ಯೋ ಹೆಣ್ಣೇ, ಮೊದ್ಲೇ ಹೇಳ್ಕೊಳ್ಳುದಲ್ವಾ? ನನ್ಗೂ, ನೀನ್ ಊರಿಗ್ ಬಂದದ್ದೇ ಗೊತ್ತಿಲ್ಲ. ಮತ್ತೆ ನಿನ್ನನ್ನ ಇವತ್ತು, ಇಲ್ಲಿ ಊಹಿಸುದಾದ್ರೂ ಹ್ಯಾಗ್ ಮಾರಾಯ್ತಿ. ನನ್ಗಂತೂ ಎಷ್ಟೋ ಜನ್ರತ್ರ ಮಾತಾಡೀ, ಮಾತಾಡೀ, ಮುಖ ನೆನಪಿಟ್ಕೊಳ್ಳುದೇ ಕಷ್ಟ" ಎಂದವರು, ಅವಳ ಗಂಡನಿಗೂ 'ಬೇಸರ ಮಾಡ್ಕೊಳ್ಬೇಡಿ' ಎಂದು ಹೇಳಿ, ಮುಂದೆ, ಹತ್ತು ಹಲವು ಸಾಂಸಾರಿಕ ಮಾತುಕತೆ ನಡೆಸಿದರು. ಈಗಲೂ ನನ್ನ ಗೆಳತಿ, ಅವರಿಗೆ "ಮಗ್ಳ ಗುರ್ತು ಸಿಕ್ಲೋರು" ಎಂದು ಹಾಸ್ಯಗೈಯ್ಯುವುದುಂಟಂತೆ!

ನನ್ನ ಬಂಧುಗಳೊಬ್ಬರು ಶುದ್ಧ ವೈದಿಕರು. ಸುತ್ತಮುತ್ತ ಅದೆಷ್ಟು ನಾಗರೀಕತೆ ಬೆಳೆದಿದ್ದರೂ, ಇನ್ನೂ ತಲೆಯ ಜುಟ್ಟು ಕತ್ತರಿಸಿದವರಲ್ಲ. ಕಿವಿಯ ಒಂಟಿ ಕಿತ್ತಿಟ್ಟವರಲ್ಲ. ಒಮ್ಮೆ, ದೇವಸ್ಥಾನವೊಂದರಲ್ಲಿ ಪ್ರದಕ್ಷಿಣೆ ನಡೆಸುತ್ತಿದ್ದಂತೇ ವೃದ್ಧೆಯೊಬ್ಬರು ಹಿಂದಿನಿಂದ ಎದುರು ಬಂದು "ಓ! ಹೇಗಿದ್ದೀರಿ? ಸುಮಾರು ದಿನ ಆಯ್ತು ನಿಮ್ಮನ್ನ ನೋಡಿ...' ಎಂದೆಲ್ಲ ಮಾತಾಡಿಸಿದರು. ಈತನಿಗೋ ಆಕೆಯ ಗುರುತು ನೆನಪಾಗದಾದರೂ, ಜನುಮಜನುಮದ ಸಂಬಂಧಿಯಂತೆ, ಪ್ರೀತಿಯಿಂದ ಮಾತಾಡುತ್ತಿರುವಾಕೆಯನ್ನು 'ನೀವ್ಯಾರು ದೊಡ್ಡಮ್ಮಾ?' ಅಂದ್ರೆ, ಏನು ಚೆಂದ?

ಎಂದುಕೊಂಡು, ತಮ್ಮ ಪೈಕಿಯ ವಯಸ್ಸಾದ ಮಹಿಳೆಯರೆಲ್ಲರನ್ನು ಜ್ಞಾಪಿಸಿಕೊಳ್ಳತೊಡಗಿದ್ದರು. ಊಹೂಂ. ಹಾಳು ಮರೆವು. ಮಿದುಳಿನ ನರನರಗಳಿಗೆ ಬೇಲಿಹಾಕಿತ್ತೇನೋ? ಆದರೇನು? ಉಪಾಯವಾಗಿ ಸಂಭಾಷಣೆ ಮುಂದುವರಿಸಿದ್ದರು. ಆಕೆಯ 'ಸಾಂಪ್ರತ' ಸಾಗಿತ್ತು. "ಮಕ್ಕಳೆಲ್ಲಾ ಸೌಖ್ಯವೆ? ಬೇಸಾಯ ಮುಗೀತಾ? ನಮ್ಮತ್ಲಾಗೆ ಆಳುಗಳು ಸಿಕ್ಕಾಪಟ್ಟೆ ಕೂಲಿ ಕೇಳ್ತಾವೆ. ನಿಮ್ಮಲ್ಲಿ ಹೇಗೆ? ಕೆಲಸಕ್ಕೆ ಜನ ಸಿಕ್ತಾರಾ? ನಮ್ಮಲ್ಲಿ ಈಗಿನ ಹೆಣ್ಣು ಮಕ್ಳೆಲ್ಲ ಬೀಡಿ ಕಟ್ತಾವೆ ನೋಡಿ. ಹಾಗಾಗಿ, ಗದ್ದೆಗಿಳಿಯುವ ಹೆಣ್ಣಾಲುಗ್ಳೇ ಇಲ್ಲ. ನಮ್ ಮಾಧು, "ಒಂದಾ ತೆಂಗಿನ ಸಸಿ ಇಡ್ಸುವಾ, ಅಥ್ವಾ, ಗದ್ದೆ ಮಾರಿಬಿಡುವಾ, ಈ ನಟ್ಲಿ, ಕೊಯ್ಲಿನ ಸಮಯದ ಈ 'ಮಂಡೆ ಬಿಸಿ'ಯಾದ್ರೂ ಇರುದಿಲ್ಲ ಅನ್ತಾನೆ" ಮಧ್ಯೆ ಮಧ್ಯೆ ಉತ್ತರಿಸುತ್ತ ಹ್ಞೂಗುಡುತ್ತ ಸಾಗಿದ್ದ ಈತನಿಗೆ, ಇದೊಂದು ಹಿಂಟ್ ಸಿಕ್ಕಿತ್ತು. 'ಹಾಗಾದ್ರೆ, ಈಕೆಯ ಮಗ ಮಾಧು ಅಂದ್ರೆ, ಮಾಧವನೋ, ಮಧುಸೂದನನೋ, ಮಹಾದೇವನೋ ಅಂತಾಯ್ತು. ನಮ್ಮ ಬಂಧುಗಳಲ್ಲಿ ಅಂಥಾ ಹೆಸರಿನವರು ಯಾರಿದ್ದಾರೆ?' ಎಂದು ಮನದೊಳಗೇ ತನಿಕೆ ನಡೆಸಿದರು. ಥ್ಥು! ಅದೂ ನೆನಪಾಗದು. ಆಕೆಯ ಮಾತು ಮುಂದರಿದಿತ್ತು. "ನೀವು ನಾಲ್ಕು ಮಂದಿಗೆ ಗುರ್ತಿರೋರು. ನಮ್ ಜಾಜಿಗೊಂದು ಒಳ್ಳೇ ನಂಟಸ್ತಿಕೆ ನೋಡಿ. ಹತ್ತದ್ಶೈದುಪವನ್ ಹಾಕ್ತಾನಂತೆ, ಇನ್ನೂ ಒಳ್ಳೇ ನೌಕ್ರಿಲಿರು ಮಾಣಿ ಅಂತಾದ್ರೆ, ವರದಕ್ಷಣೆಯೂ ಕೊಡ್ತಾನಂತೆ ನಮ್ ಮಾಧು......" ಇದೋ, ಇನ್ನೊಂದು ಹಿಂಟ್! ಈಕೆಯ ಮೊಮ್ಮಗಳು ಜಾಜಿ ಅಂದ್ರೆ, ರಾಜಲಕ್ಷ್ಮಿಯೋ, ಜಲಜಾಕ್ಷಿಯೋ, ರಾಜೇಶ್ವರಿಯೋ, ಸಾಮಾನ್ಯ ತನ್ನ ಮಗಳು ಶಾಂತಳ ವಯಸ್ಸಿನವಳಿರಬೇಕು. ನೋಡೇಬಿಡುವ ಎಂದುಕೊಂಡು, "ಆಗ್ಲಿ.. ಆಗ್ಲಿ. ನಮ್ ಶಾಂತಳದ್ದೂ ಜಾತಕ ಹೊರಹಾಕಿದ್ದೇನೆ. ಇನ್ನೂ ಯಾವ್ದೂ ಸರಿಯಾಗ್ಲಿಲ್ಲ. ಆವಾಗ, ಜಾಜಿಗೆ ಆದೀತಾ ಅಂತ ನೋಡ್ತಿರ್ತೇನೆ."

ಆಕೆಗೋ ಅಚ್ಚರಿ..! "ನಿಮ್ ಮಗ್ಳು 'ರಾಜಿ' ಅಲ್ವಾ? ಇವ್ರಿಬ್ರೂ ಕೃಷ್ಣಾಷ್ಟಮಿ ದಿನ ಹುಟ್ಟಿದ್ರೂಂತ, ಕೃಷ್ಣನಿಗಿಷ್ಟವಾದ 'ರಾಧಿಕಾ' ಅಂತ ಹೆಸರಿಟ್ಟು, ಇಬ್ರನ್ನೂ ಒಂದೇ ರೀತಿ ಕರಿಯುದ್ಕಿಂತ, ನಮ್ ಮೊಮ್ಮಗ್ಳು 'ಜಾಜಿ' ಆಗ್ಲಿ, ನಿಮ್ ಮಗ್ಳು 'ರಾಜಿ' ಇರ್ಲಿ, ಅಂದ್ಕೊಂಡಿದ್ವಲ್ಲಾ? ಮತ್ತೇ... ಶಾಂತ ಅಂತ ಹೆಸ್ರು ಬದ್ಲಾಯ್ಸಿಬಿಟ್ರಾ?....." ಎಂದಿನ್ನೇನೋ ಆಕೆ ಅನ್ನುತ್ತಿದ್ದಂತೇ, ಬೆಪ್ಪು ನೋಟ, ತಬ್ಬಿಬ್ಬಾದ ಮುಖದ, ಈ ಬಡಪಾಯಿಯನ್ನು ಗಮನಿಸಿ, 'ಹಾಗಾದ್ರೆ... ಹಾಗಾದ್ರೆ... ನೀವು ನಮ್ ರುಕ್ಮಿಣಿ ಗಂಡ ಅಲ್ವಾ? ಹಿಂದಿಂದ ಜುಟ್ಟು ನೋಡಿ ಹಾಗೇ ಅನ್ಸಿತ್ತು, ಮತ್ತೇ, ಈಗೀಗ ಕಣ್ಣು ಮಂಜು ಬೇರೆ ಗೊತ್ತಾಗ್ಲಿಲ್ಲ. ಬೇಜಾರು ಮಾಡ್ಬೇಡಿ ಆಯ್ತಾ?' ಎಂದು ಹೊರಟರು. ಕ್ಷಣ ಮಾತ್ರಕ್ಕಾದರೂ ತನ್ನನ್ನು 'ರುಕ್ಮಿಣೀ

ಪತಿ ಯಾಗಿಸಲು ಕಾರಣವಾದ, ತನ್ನ ಜುಟ್ಟನ್ನೇ ಸವರಿಕೊಳ್ಳುತ್ತ ನಿಂತಿದ್ದರಂತೆ ಆತ ತುಸುಪೊತ್ತು!

ಇಂಥಾ ಸಂದರ್ಭಗಳು ಪ್ರಸಿದ್ಧರ ಪ್ರಪಂಚದಲ್ಲಿ ಇನ್ನೂ ಹೆಚ್ಚು. ಕರಾವಳಿಯ ಕಲೆಯಾದ 'ಯಕ್ಷಗಾನ' ಪಾತ್ರಧಾರಿಯೊಬ್ಬರ ಅನುಭವವಿದು. ದಿನಕ್ಕೊಂದೆಡೆ ಪ್ರದರ್ಶನವಾದ್ದರಿಂದ, ಅಭಿಮಾನಿಗಳು ತಂತಮ್ಮ 'ಫ್ಯಾನ್' (fan) ಗಳನ್ನು ಮನೆಗೆ ಕರೆದೊಯ್ದು ಉಪಚರಿಸುವುದು ಸರ್ವೇ ಸಾಮಾನ್ಯ.

ಆತ, ಚೌಕಿಯ (ಗ್ರೀನ್ ರೂಂ)ಲ್ಲಿ, ಈ ಕಲಾವಿದರ ಪಕ್ಕ ಕುಳಿತು ಪರಟುತ್ತಿದ್ದ. "ನನ್ ತಮ್ಮನಿಗೆ ಬೊಂಬಾಯಲ್ಲಿ ಕೆಲ್ಸ ಸಿಕ್ತು ಸ್ವಾಮಿ. ಅದೇ... ಆವತ್ತು ನೀವು ಬಂದಾಗ ಆಗಷ್ಟೇ ಪೇಟೆಗೋಗ್ಬಂದಿದ್ನಲ್ಲಾ... ಅವ್ನಿಗೆ... ಮತ್ತೆ, ತಂಗಿಗೆ... ಆಗ ಬಾಣಂತಿ ಆಗಿದ್ಲಲ್ಲಾ... ಮಂಗ್ಳೂರಿಗೆ ವರ್ಗವಾಗಿದೆ. ಮತ್ತೆ, ಇನ್ನೊಬ್ಳು ತಂಗಿ, ಅದೇ, ನಿಮ್ಗೆ ಬಡಿಸ್ತಿದ್ಲಲ್ಲಾ ಅಂದು... ಹ್ಞಾ.. ಅವ್ಳಿಗೆ ಲಗ್ನ ನಿಶ್ಚಯ ಮಾಡಿದ್ವು. ನನ್ ಹೆಂಡ್ತಿ ತಮ್ಮನಿಗೇ ಕೊಡೋದೂಂತ.... ಅವ ಸ್ವಾಮಿ... ನಿಮ್ಗೆ ಬಿಸಿನೀರು ತೋಡ್ಕೊಟ್ಟಿದ್ನಲ್ಲಾ.. ದೊಡ್ದೊಡ್ಡ ಕಣ್ಣು, ಚೂಪು ಮೂಗು, ಸಾದಾಗಪ್ಪಿನವ... ನೆನಪಾಯ್ತಾ? ಅವ, ಈಗೊಂದ್ ವರ್ಷದಿಂದ ನಮ್ಮಲ್ಲೇ ಇದ್ನಲ್ಲಾ..." ಇತ್ಯಾದಿ... ಇತ್ಯಾದಿ.

ಈ ಕಲಾವಿದರೋ, ವೇಷ ಬಳಿದುಕೊಳ್ಳುತ್ತಲೇ ಹ್ಞೂಗುಟ್ಟುವರೊಮ್ಮೆ. ನಡು ನಡುವೆ, "ಓ ಅವ್ರಾ?" "ಗೊತ್ತಾಯ್ತಪ್ಪಾ" "ಹೌದಾ? ಆಗ್ಲಿ. ಸಂತೋಷ" 'ಛೆ, ಛೆ! ನೆನಪಾಗ್ದೇ ಇರ್ತದಾ?" ಮುಂತಾದ ಉದ್ಗಾರ ನಡೆಸುತ್ತಿದ್ದರು.

ಅಂತೂ, 'ಆಟ' ಆರಂಭವಾಗಿ ಸಭೆಗೆ ಪಾದ ಬೆಳೆಸಿದ ಆತನ 'ಕೊರೆತ ತಪ್ಪಿದಾಗ, ಪಕ್ಕದ ಪರಿಚಿತರೊಬ್ಬರು ಈ ಕಲಾವಿದರನ್ನು ಪ್ರಶ್ನಿಸಿದರು "ಎಂಥಾ ಭೈರಿಗೆಯಪ್ಪಾ ಆತ! ಆ 'ಚೊರೆ' (ಬೋರ್) ಮನುಷ್ಯ ಯಾರ್ ಮಾರಾಯ್ರೇ?" ಈತ ಸಮಾಧಾನದಿಂದ ಉತ್ತರಿಸಿದರು, 'ಎಲ್ಲೋ ಕಂಡಹಾಗುಂಟು ಅವ್ನನ್ನ. ಯಾವಾಗ, ಎಲ್ಲಿ ಅಂತ್ಲೇ ಹೊಳೆಯುದಿಲ್ಲ!"

ನಿಜ. ದಿನಕ್ಕೊಬ್ಬರ ಒತ್ತಾಯಕ್ಕೆ ಮಣಿದು, ವಿವಿಧ ಮನೆಗಳಿಗೆ ಭೇಟಿ ನೀಡುವ ಇವರಿಗೆ, ಪ್ರತಿಯೊಬ್ಬ ಅತಿಥೇಯರನ್ನು ಜ್ಞಾಪಕದಲ್ಲಿರಿಸಿಕೊಳ್ಳಲು, ಇವರ ಮಸ್ತಿಷ್ಕವೇನು ಕಂಪ್ಯೂಟರೆ? ಇನ್ನು, ಆಯಾ ಗೃಹಸ್ಥನ ಬಂಧುವರ್ಗದವರನ್ನೂ ಸ್ಮರಣೆಯಲ್ಲಿಟ್ಟುಕೊಳ್ಳುವುದಂತೂ ಅಸಂಭವ. ಆದರೆ.. ಜನ್ಮಾಂತರದ ಅನುಬಂಧ ತೋರುತ್ತಿರುವವರನ್ನು 'ಪರಿಚಯ ಆಗ್ಲಿಲ್ಲ' ಅಂದರೆ, ಇವರನ್ನು 'ಗರ್ವಿ,' 'ಮರೆಗುಳಿ', 'ಹುಂಬ', 'ಪೆದ್ದ'ನೆಂಬಿತ್ಯಾದಿ ವಿವಿಧ ಬಿರುದಾಂಕಿತನಾಗಿಸದೆ ಬಿಟ್ಟಾನೆಯೆ ಆತ? ಹಾಗಾಗಿ ಪ್ರಸಿದ್ಧರುಗಳಿಗೆ 'ಹೋಯ್! ಮತ್ತೇನು ವಿಶೇಷ' ಎಂದೆನ್ನುವ ಅಪರಿಚಿತರಲ್ಲಿ, 'ಉಭಯ ಕುಶಲೋಪರಿ' ಅನಿವಾರ್ಯ. ಅಲ್ಲವೆ?

---

# ವೈದ್ಯೋ ನಾರಾಯಣೊ .......

ಸೂರಿ ಹಾರ್ದಳ್ಳಿ

ಮೆಡಿಕಲ್ ಶಾಪಿನವರನ್ನು ಕಂಡರೆ ನನಗೆ ವಿಶೇಷ ಅಭಿಮಾನ – ಆದರ ಮತ್ತು ಮೆಚ್ಚುಗೆ. ಅವರ ಪ್ರತಿಭೆಯನ್ನು ನಾವುಗಳು – ಅಂದರೆ ಶ್ರೀಸಾಮಾನ್ಯರು – ಬೆಲೆ ಕಟ್ಟುವುದಾದರೂ ಸಾಧ್ಯವೇ. ಎಂತೆಂತಹ ದೇಶೀ ವಿದೇಶೀ ಡಿಗ್ರಿಗಳನ್ನು ಪಡೆದ ಡಾಕ್ಟರುಗಳು ಬರೆದುಕೊಟ್ಟ ಬ್ರಹ್ಮಲಿಪಿ (ಕೆಲ ಕಿಡಿಗೇಡಿಗಳು ಅದನ್ನು ಕಾಗೆಕಾಲು ಗುಬ್ಬಿಕಾಲು ಎಂದು ಲೇವಡಿ ಮಾಡುತ್ತಾರೆ. ಅವರಿಗೆ ನನ್ನ ಧಿಕ್ಕಾರವಿರಲಿ.)ಗಳನ್ನು ಸಲೀಸಾಗಿ ಓದಿ ಚಿತ್ರ ವಿಚಿತ್ರದ ಹೆಸರುಗಳನ್ನು ಅರ್ಥಮಾಡಿಕೊಳ್ಳುತ್ತಾರೆಂದರೆ ........

ನಾವು ನಮ್ಮ ರೋಗದ ಭಯಂಕರತೆಯನ್ನು ಅರ್ಥಮಾಡಿಕೊಳ್ಳುವುದು ವೈದ್ಯರು ಬರೆದುಕೊಟ್ಟ ಔಷಧದ ಹೆಸರು – ಸಂಖ್ಯೆ, ಅವರು ತೆಗೆದುಕೊಳ್ಳುವ ಫೀಸುಗಳ ಮೂಲಕ. ಕೆಲ ಹೆಸರುಗಳಂತೂ ನಮ್ಮ ಉಪ್ಪು ಖಾರ ತಿಂದ ನಾಲಿಗೆಗೆ ಉಚ್ಚರಿಸಲಿಕ್ಕೇ ಆಗದು. ಅದನ್ನೆಲ್ಲಾ ಸಲೀಸಾಗಿ ಓದಿ ನಿಯತ್ತಾಗಿ ತೆಗೆದುಕೊಡಬಲ್ಲ ಸಾಮರ್ಥ್ಯವಿರುವ ಮೆಡಿಕಲ್ ಶಾಪಿನವರಿಗೆ ನನ್ನ ಗೌರವಗಳು ಸದಾ ಇವೆ.

ಅವರಿಗೆ ಫಾರ್ಮ್ ಕೋರ್ಸುಗಳಲ್ಲಿ ಬಹುಶಃ ಓದುವುದನ್ನು ಬಿಟ್ಟು ಇನ್ನೇನನ್ನೂ ಕಲಿಸುವುದಿಲ್ಲವೇನೊ ಎಂಬ ಡೌಟು ನನ್ನಲ್ಲಿ ಇಂದಿಗೂ ಇದೆ. ಇರಲಿ.

ನಮ್ಮ ಕುಟುಂಬದ ಡಾಕ್ಟರು ಬರೆದುಕೊಟ್ಟ ಚೀಟಿಯನ್ನು ಕೆಳಗೆ ಮೇಲೆ ಎಲ್ಲಾ ಕಡೆ ತಿರುಗಿ ನೋಡಿದೆ. ನನಗೆ ಅಲ್ಲಿ ಏನು ಬರೆದಿದೆ ಏನು ಬರೆದಿಲ್ಲ ಎಂಬುದು ಇನಿತೂ ಅರ್ಥವಾಗಲಿಲ್ಲ. ಸುಮಾರು ಅರ್ಧ ಗಂಟೆ ಹಾಗೇ ಕುಳಿತಿದ್ದೆ. ನನ್ನ ಹಾಗೇ ಇನ್ನೂ ಹತ್ತಾರು ಜನ ನರ್ಸಿಂಗ್ ಹೋಮಿನ ವಿಸಿಟಿಂಗ್ ರೂಮಿನಲ್ಲಿ ತಮ್ಮ ಕರೆಬರುವುದನ್ನು ಕಾದು ಕುಳಿತಿದ್ದರು. ಹೆಚ್ಚು ಜನವಿದ್ದ ಮೇಲೆ ಇದು ಒಳ್ಳೆಯ ಆಸ್ಪತ್ರೆಯೆ ಇರಬಹುದು ಅನಿಸಿತು.

ನನಗೆ ಕರೆ ಬಂತು, 'ಕುಮಾರ್'. ನನ್ನ ಹೆಸರನ್ನು ಬರೆದುಕೊಂಡ ಸುಂದರ ತರುಣಿಯೊಬ್ಬಳು ನನ್ನನ್ನು ಒಳ ಕರೆದಳು. ನಮಸ್ಕಾರ ಡಾಕ್ಟರ್ ಎಂದು ನಾನು ಅಂದರೂ ಆ ವೈದ್ಯ ಮಹಾಶಯ ತಲೆಯೆತ್ತಲಿಲ್ಲ. ತಲೆ ಬಗ್ಗಿಸಿಯೇ ಚೀಟಿಯನ್ನು ಓದಿ ಬಡ ಬಡ ಅಂತ ಪಕ್ಕದಲ್ಲಿದ್ದ ನರ್ಸಿಗೆ ಅದೇನೊ ಹೇಳಿದರು. ಕೂಡಲೇ ನೆಕ್ಸ್ಟ್ ಅಂದರು.

ನರ್ಸ್ ನನ್ನನ್ನು ಕೌಂಟರೊಂದರ ಬಳಿಗೆ ಕರೆದುಕೊಂಡು ಹೋದಳು. 'ಪೇ ಪಂದ್ರೆಡ್' ಅಂದಳು. ನಾನು ಏನೇನೋ ಪ್ರಶ್ನೆ ಕೇಳಬೇಕೆಂದುಕೊಂಡಿದ್ದೆ. ಅದಕ್ಕೆ ಅವಕಾಶವೇ ಆಗಲಿಲ್ಲ. ಪಣ ಕೊಡುತ್ತಲೇ ಆಕೆ 'ಫಾಲೊ ಮಿ' ಅಂದಳು. ನಾನು ಹಿಂಬಾಲಿಸಿದೆ.

ದಿನಾಲೂ ಸಹಸ್ರಾರು ರೋಗಿಗಳು ಬರುವ ಇಲ್ಲಿ ನನ್ನಂಥ ಹಳ್ಳಿ ಗಮಾರನ ಅಸಂಬದ್ಧ ಪ್ರಶ್ನೆಗಳಿಗೆ ಉತ್ತರಿಸಲು ಇವರಿಗೆ ಸಮಯವೆಲ್ಲಿದೆ ಎಂದುಕೊಂಡೆ.

ಬೀರುವಿನಿಂದ ಮಾತ್ರೆಯೊಂದನ್ನು ತೆಗೆದು 'ಬಾಯಿ ತೆಗೆಯಿರಿ' ಅಂದವಳೇ ನನ್ನನ್ನು ಏನೂ ಕೇಳದೇ ಬಾಯಿಯೊಳಗೆ ತುರುಕಿ ಗುಟುಕು ನೀರು ಕುಡಿಸಿದಳು.

ಅಷ್ಟು ಮಾತ್ರ ನನಗೆ ನೆನಪಿದ್ದದ್ದು.

ಎಷ್ಟೋ ಹೊತ್ತಿನ ನಂತರ ಕಣ್ಣು ಬಿಟ್ಟು ನೋಡಿದೆ. ಬೆಳ್ಳಗಿನ ಬಟ್ಟೆ ಹೊದೆಸಿದ ಹಾಸಿಗೆಯ ಮೇಲೆ ಮಲಗಿದ್ದೇನೆ. ಸುತ್ತ ನನ್ನ ಹಾಗೆ ಅನೇಕರು ಮಲಗಿದ್ದರು. ಕೆಲವರ ಕೈಗೆ ಡ್ರಿಪ್ಸ್ ಚುಚ್ಚಿದ್ದರು. ಇನ್ನು ಕೆಲವರು ನರಳುತ್ತಿದ್ದರು. ನರ್ಸುಗಳು ಪುಟಪುಟು ಹೆಜ್ಜೆಯಿಡುತ್ತಾ ಅತ್ತಿಂದಿತ್ತ ಓಡಾಡುತ್ತಿದ್ದು ಎಲ್ಲೆಡೆ ಮಾತ್ರೆ – ಔಷಧಗಳ ವಾಸನೆ. ನಾನು ಯಾರು ....... ಇಲ್ಲಿಗೆ ಯಾಕೆ ಬಂದೆ ಎಂದೆಲ್ಲಾ ತಿಳಿಯಲಾಗದೆ ಕಣ್ಣು ಭಾರವೆನಿಸಿ ಮತ್ತೆ ಹಾಸಿಗೆಯಲ್ಲಿ ಅಡ್ಡಾದೆ.

ಡಾಕ್ಟರು ಬರ್ತಿದ್ದಾರೆ ಎಂಬ ದನಿ ಕೇಳಿಸಿ ಕಷ್ಟಪಟ್ಟು ಕಣ್ಣು ತೆರೆದೆ. ಬಿಳೀ ಗೌನನ್ನು ತೊಟ್ಟ ಒಬ್ಬರು – ಅವರು ಡಾಕ್ಟರೇ ಇರಬೇಕು ಮತ್ತು ಅವರ ಹಿಂದೆ ಹಲವಾರು ಯುವಕರು – ಅವರು ವಿದ್ಯಾರ್ಥಿಗಳಿರಬೇಕು – ನನ್ನ ಬೆಡ್ಡಿನ ಹತ್ತಿರ ಬಂದರು. ಎಲ್ಲರೂ ನನ್ನ ಸುತ್ತ ಸೇರಿದರು. ಕೆಲವರು ನನ್ನ ಚಾರ್ಟ್ ಓದಿದರೆ ಇನ್ನು ಕೆಲವರು ನನ್ನನ್ನು ಒಂದು ವಿಚಿತ್ರ ಪ್ರಾಣಿಯೆಂಬಂತೆ ನೋಡುತ್ತಾ ನಾಡಿ ಪರೀಕ್ಷಿಸಿದರು, ಬಾಯಿ ತೆಗೆ ಎಂದು ಹೇಳಿ ಹಲ್ಲುಗಳನ್ನು ಎಣಿಸಿದರು(?), ನನ್ನ ಕೈ ಕಾಲುಗಳ ಸಂದಿಯ ಮೂಳೆಗಳ ಮೇಲೆ ಸಣ್ಣ ಸುತ್ತಿಗೆಯಿಂದ ಕುಟ್ಟಿದರು, ಒಬ್ಬ ಗಟ್ಟಿಯಾಗಿ ಕಿರಿಚು ಎಂದು ಹೇಳಿದನು, ಇನ್ನೊಬ್ಬ ನನ್ನ ಕಿವಿ ಮೂಗುಗಳನ್ನು ಹಿಸುಕಿ ಹಿಸುಕಿ ನೋಡಿದನು.

ಅವರೆಲ್ಲಾ ತಮ್ಮ ತಮ್ಮಲ್ಲೇ ವೈದ್ಯಕೀಯ ಭಾಷೆಯಲ್ಲಿ ಏನೇನೋ ಮಾತಾಡಿಕೊಂಡರು. ಕೆಲವರ ಮುಖದಲ್ಲಿ ಅಚ್ಚರಿ. ಕೆಲವ ದನಿಯಲ್ಲಿ ಆತಂಕ – ಕುತೂಹಲ. ಡಾಕ್ಟರು ಹೇಳಿದರು, 'ದಿಸ್ ಈಸ್ ದ ಸ್ಪೆಷಲ್ ಕೇಸ್. ನೆವರ್ ಇನ್ ಮೈ ಸರ್ವೀಸ್'.

ನಾನು ಕ್ಷೀಣ ಸ್ವರದಲ್ಲಿ ಕೇಳಿದೆ 'ನನಗೆ ಏನಾಗಿದೆ ಸರ್?'

'ಇನ್ನೂ ಡಯಗ್ನೈಸ್ ಮಾಡ್ಲಿಕ್ಕಾಗಿಲ್ಲ. ಎಕ್ಸರೇ, ಬ್ಲಡ್ – ಯೂರಿನ್ ಟೆಸ್ಟ್ ಇ.ಸಿ.ಜಿ ಎಲ್ಲಾ ಮಾಡಿಯಾಗಿದೆ. ಏನೂ ಗೊತ್ತಾಗಿಲ್ಲ. ವಿ ಹೋಪ್ ವಿ ವಿಲ್ ಗೆಟ್ ದ ರಿಸಲ್ಟ್ ಸೂನ್. ಇವತ್ತು ಸ್ಕ್ಯಾನಿಂಗ್ ಮಾಡ್ತೀವಿ. ನೋಡೋಣ', ಎಂದವರು ನನ್ನ ಉತ್ತರಕ್ಕೂ ಕಾಯದೇ ಮುಂದಿನ ಬೆಡ್‌ಗೆ ಹೊರಟು ಹೋದರು. ಹಿಂದೆಯೇ ನರ್ಸೊಬ್ಬಳು ನನಗೆ ಇಂಜಕ್ಷನ್ ಒಂದನ್ನು ಚುಚ್ಚಿದಳು.

ನಾನು ಮತ್ತೆ ಮಲಗಿದೆ.

ಮುಂದಿನದೆಲ್ಲಾ ನನಗೆ ಮಸುಕು ಮಸಕು. ನನ್ನನ್ನು ಯಾವುದೋ ಆನೆಗಾತ್ರದ ಯಂತ್ರದೊಳಗೆ ತೂರಿಸಿದರು. ದೇಹದ ಎಲ್ಲಾ ರಕ್ತನಾಳಗಳಿಗೆ ತಂತಿಯನ್ನು ಬಿಗಿದರು. ಬಾಯಿಗೆ ಯಾವುದಾವುದೊ ದ್ರಾವಣಗಳನ್ನು ಸುರುವಿದರು. ಸುತ್ತ ಹಲವಾರು ಜನ ಸೇರಿ ಮುಸುಮುಸು ಅಂತ ಅವರವರೊಳಗೇ ಮಾತಾಡಿಕೊಂಡರು.



ಮತ್ತೆ ಎರಡು ದಿನ ಕಳೆಯಿತು. ಸ್ವಲ್ಪ ಚೇತರಿಸಕೊಂಡೆ. ನರ್ಸೊಬ್ಬಳು ಬಂದಾಗ ಕೇಳಿದೆ 'ಸಿಸ್ಟರ್.... ನನಗೆ ಏನು ಆಗಿದೆ'?

'ನನಗೇನು ಗೊತ್ತು. ಡಾಕ್ಟರನ್ನು ಕೇಳಿ' ಅಂದಳು.

ಇಲ್ಲಿ ಒಂದು ಜೋಕನ್ನು ನೆನಪಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. ಹೀಗೇ ಒಂದು ಆಸ್ಪತ್ರೆ ರೌಂಡಿಗೆ ಬಂದ ಡಾಕ್ಟರು ರೋಗಿಯೊಬ್ಬನನ್ನು ಪರೀಕ್ಷಿಸಿ ನರ್ಸಿಗೆ ಅಂದರಂತೆ . 'ನರ್ಸ್ ಇವನು ಸತ್ತು ಹೋಗಿದ್ದಾನೆ. ಶವಾಗಾರರಕ್ಕೆ ಬಾಡಿಯನ್ನು ಸಾಗಿಸಿ', ಅಂತ.

ನನ್ನಂತ ಮೂರ್ಖ ಪೇಶೆಂಟಿರಬೇಕು. ಕೂಗಿಕೊಂಡನಂತೆ. 'ಡಾಕ್ಟರೇ ನಾನು ಬದುಕಿದ್ದೀನಿ' ಅಂತ. ನರ್ಸ್ ಗದರಿದಳಂತೆ. 'ಸುಮ್ಮನೆ ಬಿದ್ಕೊ ಹಾಗನ್ನೋಕೇ ನೀನೇನು ಮೆಡಿಕಲ್ ಓದಿದ್ದೀಯ' ಅಂತ.

ಡಾಕ್ಟ್ರು ಬಂದರು. ನಾನು ಕೇಳಿದೆ. 'ಡಾಕ್ಟರೇ ನನಗೆ ಏನಾಗಿದೆ? ನಾನು ಯಾಕೆ ಇಲ್ಲಿದ್ದೀನಿ. ಇನ್ನು ಎಷ್ಟು ದಿನ ಇಲ್ಲಿರಬೇಕು' ಅಂತ.

ಡಾಕ್ಟರು ನನ್ನತ್ತ ನೋಡಿ ನಯವಾಗಿ ಹೇಳಿದರು. 'ಏನೂ ಯೋಚನೆ ಮಾಡಬೇಡಿ ಕುಮಾರ್. ನೀವು ಆರೋಗ್ಯವಾಗಿದ್ದೀರಿ. ನಿಮಗೆ ಯಾವ ರೋಗವೂ ಇಲ್ಲ. ಹೊತ್ತಿಗೆ ಸರಿಯಾಗಿ ಒಳ್ಳೆಯ ಆಹಾರವನ್ನು ತೆಗೆದುಕೊಳ್ಳಿ. ದಿನಾ ಸ್ವಲ್ಪ ಕಾಲ ವ್ಯಾಯಾಮಾ ಮಾಡಿ. ಚೆನ್ನಾಗಿ ನಿದ್ರಿಸಿ. ಏನೂ ಯೋಚನೆ ಮಾಡಬೇಡಿ. ನಿಮ್ಮನ್ನ ಇವತ್ತೇ ಡಿಸ್‌ಚಾರ್ಜು ಮಾಡ್ತೀವಿ'.

ನನಗೆ ಹಳೆಯದೆಲ್ಲಾ ನೆನಪಿಗೆ ಬಂತು. 'ಡಾಕ್ಟರೇ ನಾನು ಒಂದು ಚೀಟಿಯನ್ನು ನಿಮಗೆ ಕೊಟ್ಟಿದ್ದೆನಲ್ಲ. ಅದು'...

'ಓ ಅದನ್ನು ನೋಡಿಯೇ ನಾನು ನಿಮ್ಮನ್ನು ಪರೀಕ್ಷೆಗೆ ಒಳಪಡಿಸಿದ್ದು. ಆ ಡಾಕ್ಟರು ಬರೆದುಕೊಟ್ಟಂತೆ ನಿಮಗೇನೂ ಆಗಿಲ್ಲ. ಡೋಂಟ್ ವರಿ. ನೀವು ಇವತ್ತು ಸಂಜೆ ಹೊರಟು ಹೋಗಬಹುದು. ಮೆಡಿಕಲ್ ಬಿಲ್ಲು ಸುಮಾರು ಹನ್ನೆರಡು ಸಾವಿರ ಆಗಿದೆ. ಕೊಟ್ಬಿಡಿ', ಡಾಕ್ಟರ್ ಆಘಾತಕಾರಿ ಮಾತು.

'ಡಾಕ್ಟರೇ ಆ ಚೀಟಿಯಲ್ಲಿ ಬರೆದಂತೆ ನನಗೆ ಏನೂ ರೋಗವಿಲ್ಲ. ಅದು ನನ್ನ ಹೆಂಡತೀದು', ನಾನು ಹಲಬಿದೆ.

ಮತ್ತೆ ಅದರಲ್ಲಿ ಪೇಶೆಂಟಿನ ಹೆಸರು ವಿಜಯಕುಮಾರ್ ಅಂತಿದೆ. ಅದು ನೀವಲ್ವೇ?

'ಅದು ನಾನಲ್ಲ ಡಾಕ್ಟರ್. ನನ್ನ ಹೆಸರು ಬರೀ ಕುಮಾರ್ ನನ್ನಾಕೆಯ ಹೆಸರು ವಿಜಯ ಅಂತ. ಅವಳಿಗೆ ಆರೋಗ್ಯ ಚೆನ್ನಾಗಿಲ್ಲ. ನೀವು ನನ್ನ ಮೇಲೆ ಪರೀಕ್ಷೆ ನಡೆಸಿದಿರೊ ಹೇಗೆ?' ನಾನು ದಿಗಿಲಾಗಿ ಅಂದೆ.

'ಹೋಗ್ಲಿ ಬಿಡಿ. ಅದಕ್ಕೆ ಯಾಕೆ ಚಿಂತಿಸ್ತೀರಿ. ನಲವತ್ತು ದಾಟಿದ ಮೇಲೆ ಹೀಗೆ ಆಗೊಮ್ಮೆ ಈಗೊಮ್ಮೆ ಚೆಕ್ ಮಾಡಿಸಿಕೊಳ್ಳೋದು ಒಳ್ಳೇದು' ವೈದ್ಯೋ ನಾರಾಯಣೋ ಹರಿಃ!

ಗಾದೇನೇ ಇಲ್ವೇ ...... ಸಂಗೀತಗಾರ ಅತ್ತರೂ ರಾಗ ಅಂತ!

---

# ಹಾಸ್ಯ ಎಷ್ಟು ಅವಶ್ಯ?

**ಎಚ್. ಡುಂಡಿರಾಜ್**

(ಇದು ನಗರವಾಸಿಗಳಾದ ಮುತ್ತಣ್ಣ, ರಂಗನಾಥ ಮತ್ತು ಅವನ ಪತ್ನಿ ರತ್ನಾ ನಡೆಸಿದ ಕಾಡುಹರಟೆಯಲ್ಲ. ಪೇಟೆ ಹರಟೆ!)

**ಮುತ್ತಣ್ಣ:** ನಮಸ್ಕಾರ ರಂಗಣ್ಣ. ಇವತ್ತು ಸೂರ್ಯ ಯಾವ ಕಡೆ ಮೂಡಿದಾನೆ?

**ರಂಗನಾಥ:** ಯಾವ ಕಡೆ ಮೂಡಿದಾನೋ ಯಾರಿಗೊತ್ತು? ಅವನು ಮೂಡಿದಾಗ ನಾವಿನ್ನೂ ಎದ್ದಿರಲಿಲ್ಲ. ಮುಳುಗಿದ್ದು ಮಾತ್ರ ಎಂದಿನ ಹಾಗೆ ಪಶ್ಚಿಮದಲ್ಲೆ. ಅದಿರ್‍ಲಿ ಯಾಕಿವತ್ತು ಎಲ್ಲಾ ಬಿಟ್ಟು ಸೂರ್ಯನ ಬಗ್ಗೆ ಕೇಳ್ತಾ ಇದೀಯಲ್ಲ?

**ಮುತ್ತಣ್ಣ:** ಯಾಕೆ ಅಂತ ರತ್ನಕ್ಕನ್ನ ಕೇಳು ಅವರಿಗೆ ಗೊತ್ತಾಗಬಹುದು.

**ರಂಗನಾಥ:** ಇಲ್ವಲ್ಲ. ವಿಷಯ ಏನೂಂತ ನೇರವಾಗಿ ಹೇಳಿ. ಹೀಗೆ ಒಗಟಿನ ತರಹ ಮಾತಾಡಿದ್ರೆ ನನಗೆ ಅರ್ಥವಾಗೊಲ್ಲ.

**ಮುತ್ತಣ್ಣ:** ಇನ್ನೇನಿಲ್ಲ. ಯಾವಾಗ ನೋಡಿದ್ರೂ ಹಾವು ಮುಂಗುಸಿ ತರಹ ಕಚ್ಚಾಡ್ತಾ ಇರುವ ನೀವಿಬ್ರೂ ಇವತ್ತು ನಾನು ಬರೋವಾಗ ಬಿದ್ದು ಬಿದ್ದು ನಗ್ತಾ ಇದ್ರಲ್ಲ. ಅದನ್ನ ನೋಡಿ ಆಶ್ಚರ್ಯ ಆಯ್ತು. ಅದಕ್ಕೆ ಸೂರ್ಯ ಯಾವ ಕಡೆ ಮೂಡಿದಾನೆ ಅಂತ ಕೇಳಿದ್ದು.

**ರಂಗನಾಥ:** ಓಹೋ ಅದಾ? ಬಾ ಕೂತ್ಕೊ. ಎಲ್ಲ ವಿವರವಾಗಿ ಹೇಳ್ತೀನಿ. ರತ್ನಾ ರತ್ನಾ.....

**ರತ್ನಾ:** ಕಾಫಿ ಅಲ್ವಾ? ಈಗ ತರ್‍ತೀನಿ.

**ರಂಗನಾಥ:** ನೋಡಿದ್ಯೇನಯ್ಯ. ಹೆಂಡತಿ ಅಂದರೆ ಹೀಗಿರಬೇಕು. ಬಾಯಿ ಬಿಟ್ಟು ಹೇಳುವ ಮೊದಲೆ ನಮ್ಮ ಮನಸ್ಸಿನ ಇಂಗಿತ ಗ್ರಹಿಸುವವಳೆ ನಿಜವಾದ ಹೆಂಡತಿ. ಇಂಥವಳನ್ನ ಕೈ ಹಿಡಿದ ನಾನೇ ಧನ್ಯ.

**ಮುತ್ತಣ್ಣ:** ಇದೇನಪ್ಪಾ? ಒಳ್ಳೆ ಸಿನಿಮಾ ಡೈಲಾಗ್ ಹೊಡೀತಾ ಇದ್ದೀಯಾ. ಇವತ್ತು ಹೆಂಡತಿ ಬಗ್ಗೆ ಭಾರೀ ಪ್ರೀತಿ ಉಕ್ಕಿರೋ ಹಾಗಿದೆ. ನನಗೊಂದೂ ಅರ್ಥವಾಗ್ತಾ ಇಲ್ಲ. ಆದರೆ ಭಾರೀ ಖುಷಿಯಲ್ಲಿ ಇದ್ದೀಯಾ ಅನ್ನೋದು ನಿನ್ನ ಮುಖ ನೋಡಿದ್ರೆ ಗೊತ್ತಾಗುತ್ತೆ. ಸದಾ

ಸುಟ್ಟ ಬದನೆಕಾಯಿ ಹಾಗಿರ್ತಿದ್ದ ನಿನ್ನ ಮೋರೆ ಇವತ್ತು ರಸಪುರಿ ಮಾವಿನ ಹಣ್ಣಿನ ಹಾಗೆ ಆಗಿದೆ. ಲಾಟರಿಯಲ್ಲಿ ಬಂಪರ್ ಬಹುಮಾನ ಏನಾದ್ರೂ ಹಾರ್ತಾ?

**ರಂಗನಾಥ:** ಬಂಪರೂ ಇಲ್ಲ ಮಂಪರೂ ಇಲ್ಲ. ಹಣ ಇದ್ದರೆ ಮಾತ್ರ ಮನುಷ್ಯ ಖುಷಿಯಾಗಿರ್ತಾನೆ ಅಂತ ತಿಳ್ಕೋಬೇಡ. ಹಣದಿಂದ ಸಂತೋಷವನ್ನ ಖರೀದಿ ಮಾಡೋಕಾಗೋದಿಲ್ಲ. ನೋಡು ಮುತ್ತಣ್ಣ ನಿನಗೆ ಬದುಕಿನಲ್ಲಿ ಸಂತೋಷ ಬೇಕು ಅಂದ್ರೆ...

**ರತ್ನ:** ತಗೊಳ್ಳಿ.

**ಮುತ್ತಪ್ಪ:** ಏನು ಸಂತೋಷಾನಾ?



**ರತ್ನ:** ಅಲ್ಲ ಕಾಫಿ.

**ಮುತ್ತಪ್ಪ:** ಇಷ್ಟೊಂದು ಬೇಡ. ನಾನೀಗ ಕುಡಿದು ಬಂದೆ. ಅರ್ಧ ಕಪ್ ಸಾಕು.

**ರತ್ನ:** ಆದೇನೊ ಸಂತೋಷ ಸಂತೋಷ ಅಂತ ಕೊರೀತಾ ಇದ್ರಲ್ಲ. ನಿಮ್ಮ ಸಂತೋಷದ ನಡುವೆ ಈ ಕಾಫಿ ಎಂಬ ವಿಷ ತಂದು ವಿಷಯಾಂತರ ಮಾಡಿದ್ದಕ್ಕೆ ಬೇಸರಮಾಡ್ಕೋಬೇಡಿ.

**ರಂಗನಾಥ:** ಓ.ಕೆ. ಕಾಫಿಕೊಟ್ಟಿದ್ದರಿಂದ ನಿನ್ನ ತಪ್ಪನ್ನು ಮಾಫಿ ಮಾಡಿದ್ದೇನೆ.

**ಮುತ್ತಪ್ಪ:** ಗಂಡ ಹೆಂಡತಿ ಇಬ್ಬರೂ ಬಹಳ ಪ್ರಾಸಬದ್ಧವಾಗಿ ಮಾತಾಡ್ತಾ ಇದ್ದೀರಲ್ಲ.

**ರಂಗನಾಥ:** ಪ್ರಾಸದಿಂದ ಮನಸ್ಸಿಗೆ ಸಂತೋಷವಾಗುತ್ತೆ.

**ಮುತ್ತಪ್ಪ:** ಅಂತೂ ಗಂಡ ಹೆಂಡತಿ ಇಬ್ಬರೂ ಸೇರ್‍ಕೊಂಡು ಸಂತೋಷವಾಗಿ ಇರಲಿಕ್ಕೆ ಏನೋ ಒಂದು ಸೂತ್ರ ಕಂಡುಹಿಡಿದಿದ್ದೀರಿ. ಅಂತ ಕಾಣುತ್ತೆ. ಅದು ಏನು ಅಂತ ನನಗೂ ಸ್ವಲ್ಪ ಹೇಳಯ್ಯಾ.

**ರಂಗನಾಥ:** ಹೇಳ್ತೀನಿ ಕೇಳು. ಏಪ್ರಿಲ್ 1ನೇ ತಾರೀಖು ನಮ್ಮ ಹಾಸ್ಯ ಸಂಘದವರು ಮೂರ್ಖರ ದಿನಾಚರಣೆ ಅನ್ನೋ ಕಾರ್ಯಕ್ರಮ ನಡೆಸಿದ್ದರು. ಅದಕ್ಕೆ ನಾವಿಬ್ರೂ ಹೋಗಿದ್ವಿ.

**ಮುತ್ತಪ್ಪ:** (ನಗುತ್ತಾ) ನೀವಿಬ್ರೂ ಮೂರ್ಖರು ಅಂತ ಅವರಿಗೆ ಹ್ಯಾಗೆ ಗೊತ್ತಾಯ್ತು?

**ರತ್ನ:** ಇಂಥ ಕಾರ್ಯಕ್ರಮಕ್ಕೆ ಹೋಗದೆ ಇರುವವರೇ ಮೂರ್ಖರು. ಮೂರ್ಖರ ದಿನಾಚರಣೆಗೆ ಹೋಗಿ ಅಲ್ಲಿನ ಭಾಷಣ, ಹಾಸ್ಯ ಚಟಾಕಿಗಳನ್ನ ಕೇಳಿದ್ದರೆ ನಿಮಗೆ ಅದರ ಮಹತ್ವ ಗೊತ್ತಾಗ್ತಿತ್ತು.

**ರಂಗನಾಥ:** ನೋಡು ಮುತ್ತಣ್ಣ ನಾವು ವರ್ಷವಿಡೀ ನಮಗೆ ಗೊತ್ತಿಲ್ಲದ ಹಾಗೆ ಮೂರ್ಖರಾಗ್ತಾ ಇದ್ದೇವೆ. ಒಬ್ಬರನ್ನು ಇನ್ನೊಬ್ಬರು ಫೂಲ್ ಮಾಡಿ ಬದುಕುವ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಇವತ್ತು ನಾವು ಬದುಕ್ತಾ ಇದ್ದೇವೆ. ನಮ್ಮ ಮಕ್ಕಳೇ ನಮ್ಮನ್ನು ಮೂರ್ಖರನ್ನಾಗಿ ಮಾಡಿದರೂ ಆಶ್ಚರ್ಯವಿಲ್ಲ. ಹೀಗಿರುವಾಗ ವರ್ಷಕ್ಕೊಮ್ಮೆ ಅಧಿಕೃತವಾಗಿ ನಾವು ಮೂರ್ಖರು ಅಂತ ಒಪ್ಕೊಂಡ್ರೆ ಏನು ತೊಂದ್ರೆ?

**ಮುತ್ತಪ್ಪ:** ತೊಂದರೆ ಇಲ್ಲದೆ ಇರಬಹುದು. ಆದರೆ ಅದರಿಂದ ಪ್ರಯೋಜನ ಏನು?

**ರಂಗನಾಥ:** ಪ್ರಯೋಜನ ಇದೆ. ನಮ್ಮ ಸಭ್ಯತೆ, ಶ್ರೀಮದ್ ಗಾಂಭೀರ್ಯ, ವಿಚಾರವಂತಿಕೆ, ಬುದ್ಧಿವಂತಿಕೆ ಮುಂತಾದ ಮುಖವಾಡಗಳನ್ನೆಲ್ಲ ಕಿತ್ತು ಬಿಸಾಕಿ – ಒಂದು ನಿಮಿಷ ನಮ್ಮ ನಿಜವಾದ ಸಹಜವಾದ ಮುಖವನ್ನು ನಾವು ಹಾಸ್ಯ ಅನ್ನುವ ಕನ್ನಡಿಯಲ್ಲಿ ನೋಡಿಕೊಂಡರೆ ನಮ್ಮ ವ್ಯಕ್ತಿತ್ವದ ಓರೆಕೋರೆಗಳು ನಮಗೆ ಚೆನ್ನಾಗಿ ತಿಳಿಯುತ್ತದೆ.

**ರತ್ನ:** ಆಗ ಅದನ್ನು ನಾವು ಸುಲಭವಾಗಿ ಸರಿಪಡಿಸಿಕೊಳ್ಳಬಹುದು. ಬೇರೆಯವರು ಹೇಳಿದರೆ ನಮಗೆ ಅವರು ನಮ್ಮನ್ನ ಟೀಕೆ ಮಾಡ್ತಾರೆ ಅಂತ ಸಿಟ್ಟು ಬರುತ್ತೆ ಅಲ್ಲವಾ?

**ಮುತ್ತಪ್ಪ:** ಅದು ನಿಜ, ಒಳ್ಳೆಯ ಹಾಸ್ಯ ಅಂದರೆ ಅದು ಸಕ್ಕರೆ ಲೇಪಿಸಿದ ಕಹಿಗುಳಿಗೆ ಹಾಗಿರುತ್ತೆ. ನಮ್ಮನ್ನು ನಗಿಸುವುದರ ಜೊತೆಗೆ ನಾವು ಆತ್ಮಾವಲೋಕನ ಮಾಡಿಕೊಳ್ಳುವಂತೆಯೂ ಅದು ಪ್ರೇರಣೆ ನೀಡುತ್ತೆ. ಆದರೆ ಹಾಸ್ಯದ ಹೆಸರಲ್ಲಿ ಹಳೆಯ ಸವಕಲು ಸಂಗತಿಗಳನ್ನ ಬೇರೆ ಬೇರೆ ರೀತಿಯಲ್ಲಿ ಹೇಳೋದು, ಕೆಟ್ಟದಾಗಿ ಮೈ ಕೈ ಕುಣಿಸಿ ಕಪಿಚೇಷ್ಟೆ ಮಾಡೋದು, ಯಾರನ್ನೋ ಗೇಲಿ ಮಾಡೋದು ಇವುಗಳಿಂದ ಬರೆ ಸಮಯ ಹಾಳು ವಿನಹ ಏನೂ ಲಾಭ ಇಲ್ಲ.

**ರಂಗನಾಥ:** ಇದಕ್ಕೆ ನೀವೇ ಕಾರಣ.

**ಮುತ್ತಪ್ಪ:** ಅಯ್ಯೋ ದೇವರೇ ಇದಕ್ಕೂ ನನಗೂ ಯಾಕೆ ತಳಕು ಹಾಕ್ತೀರಿ?

**ರತ್ನ:** ಹಾಸ್ಯ ಅಂದ್ರೆ ಕಳಪೆ. ನಕ್ಕುಬಿಟ್ಟರೆ ಎಲ್ಲಿ ನಿಮ್ಮ ಗಾಂಭೀರ್ಯ ಸೋರಿಹೋಗುತ್ತೋ ಅಂತ ನಿಮ್ಮಂತಹ ಬುದ್ಧಿಜೀವಿಗಳು ಸಾಹಿತ್ಯ ಮತ್ತು ಕತೆಗಳಲ್ಲಿ ಹಾಸ್ಯವನ್ನು ಕಡೆಗಣಿಸಿದ್ದೀರಿ. ಈ ಪ್ರಕಾರದಲ್ಲಿ ಹೆಚ್ಚು ಜನ ಕೃಷಿ ಮಾಡದೆ ಇರೋದ್ರಿಂದಲೇ ಇಂದು ನಮಗೆ ಒಳ್ಳೆಯ ಹಾಸ್ಯ ಸಿಗ್ತಾ ಇಲ್ಲ.

**ರಂಗನಾಥ:** ಒಳ್ಳೆಯ ಹಾಸ್ಯ ಸಿಗದೇ ಇರೋದ್ರಿಂದ ನಾವ್ಯಾರೂ ಮನಃಪೂರ್ವಕವಾಗಿ ನಗ್ತಾ ಇಲ್ಲ. ನಗುವುದನ್ನು ಬಿಟ್ಟದ್ದರಿಂದಲೇ ನಾವು ಇವತ್ತು ಸದಾ ಅಳ್ತಾ ಇರೋ ಪರಿಸ್ಥಿತಿ ಬಂದಿದೆ.

**ಮುತ್ತಪ್ಪ:** ಯಾಕೆ ನಗಬೇಕು. ಹೇಗೆ ನಗಬೇಕು ಅಂತ ನೀವಿಬ್ರೂ ಸೇರಿ ಹೀಗೆ ಒಂದೇ ಸಮನೆ ಕೊರೀತಾ ಇದ್ರೆ – ನಾನು ನಿಜವಾಗಿ ಅಳಬೇಕಾದ ಪರಿಸ್ಥಿತಿ ಬರುತ್ತೆ ನೆನಪಿರಲಿ.

**ರಂಗನಾಥ :** ಓಹ್! ಹೌದಲ್ಲ. ಹಾಸ್ಯದ ಬಗ್ಗೆ ನಾವು ಇಷ್ಟೊಂದು ಗಂಭೀರವಾಗಿ ಚರ್ಚೆ ಮಾಡೋದೆ ವಿಪರ್ಯಾಸ. ಈ ಒಣ ಚರ್ಚೆಯನ್ನು ಬಿಟ್ಟು ನಾನೀಗ ಒಂದು ಒಳ್ಳೆಯ ಹಾಸ್ಯ ಚಟಾಕಿ ಹೇಳ್ತೀನಿ.

**ರತ್ನ:** ಬೇಡ ದಯವಿಟ್ಟು ಹೇಳಬೇಡಿ.

**ಮುತ್ತಪ್ಪ:** ಅರೆ. ಯಾಕೆ? ನಕ್ಕು ನಕ್ಕು ಹೊಟ್ಟೆ ಹುಣ್ಣಾದರೆ ಏನು ಗತಿ ಅಂತ ಭಯಾನಾ?

**ರತ್ನ:** ನೋಡಿ, ಹಾಸ್ಯ ಯಾವಾಗಲೂ ಅನಿರೀಕ್ಷಿತ ಆಗಿರಬೇಕು. ನಾನೀಗ ಜೋಕ್ ಹೇಳ್ತೇನೆ ಅಂತ ಅನೌನ್ಸ್ ಮಾಡಿ ಹೇಳಿದ್ರೆ ಅದರಲ್ಲಿ ಅಷ್ಟು

ಸ್ವಾರಸ್ಯ ಇರೋಲ್ಲ. ಯಾರಾದ್ರೂ ನಿಮಗೆ ಕಚಗುಳಿ ಇಡ್ತೇನೆ ಅಂತ ಹೇಳಿ ಕಚಗುಳಿ ಇಟ್ರೆ ನಿಮಗೆ ಹೆಚ್ಚು ನಗು ಬರೋಲ್ಲ ಆದರೆ,

**ರಂಗನಾಥ:** (ಕಚಗುಳಿ ಅನುಭವಿಸುವಂತೆ) ಹ್ಹಿ. ಹ್ಹಿ ಏಯ್ ಬಿಡು ಏನಿದು? ಹ್ಹಿ ಹ್ಹಿ ಉಹೂ.

**ರತ್ನ:** ಹೀಗೆ ಅನಿರೀಕ್ಷಿತವಾಗಿ ಕಚಗುಳಿ ಇಟ್ರೆ ಅದರ ಮಜವೇ ಬೇರೆ ಅಲ್ಲವಾ?

**ರಂಗನಾಥ:** ನೀನು ಹೀಗೆ ಪ್ರಯೋಗ ಮಾಡಿ ತೋರಿಸಿದ ಮೇಲೆ ಒಪ್ಪಲೇಬೇಕು. ಏನಂತಿ ಮುತ್ತಣ್ಣ?

**ಮುತ್ತಪ್ಪ:** ಇನ್ನೇನಿಲ್ಲ. ಶಿವಪೂಜೆ ಮಧ್ಯೆ ಕರಡಿ ಬಂದ ಹಾಗಾಯ್ತು ಅಂತೀನಿ.

**ರತ್ನ:** ಅಂದ್ರೆ?

**ಮುತ್ತಪ್ಪ:** ನೀವಿಬ್ರೂ ಅಪರೂಪಕ್ಕೆ ಹೊಸ ದಂಪತಿಗಳ ಹಾಗೆ ಸರಸ-ಸಲ್ಲಾಪದ ಮೂಡ್‌ನಲ್ಲಿದ್ದಾಗ ನಾನು ಮಧ್ಯೆ ಬರೋದು ಸರಿಯಲ್ಲವೇನೋ ಅನ್ನುತ್ತೆ.

**ರಂಗನಾಥ:** ಛೇ ಛೇ ಹಾಗೇನಿಲ್ಲ. ಕೂತ್ಕೋ ನೀನು ನಮ್ಮವನೇ ಅಲ್ಲವಾ?

**ರತ್ನ:** ಅದೇ ಕಣ್ರೀ. ಆವತ್ತು ಹಾಸ್ಯ ಕಾರ್ಯಕ್ರಮಕ್ಕೆ ಹೋಗಿ ಬಂದಾಗಿನಿಂದ ಇವರ ರಸಿಕತೆ ಹೆಚ್ಚಾಗ್ತಾ ಇದೆ.

**ರಂಗನಾಥ:** ಯಾಕಂದ್ರೆ, ಹಾಸ್ಯರಸಕ್ಕೂ ಶೃಂಗಾರರಸಕ್ಕೂ ಬಹಳ ಹತ್ತಿರದ ಸಂಬಂಧ ಇದೆ. ಇವೆರಡೂ ಅಕ್ಕ ತಂಗಿಯರಿದ್ದ ಹಾಗೆ ಅನ್ನಬಹುದು.

**ಮುತ್ತಪ್ಪ:** ನಮ್ಮ ಶಾಸ್ತ್ರಗಳ ಪ್ರಕಾರ ಒಂದೊಂದು ರಸಕ್ಕೆ ಒಂದೊಂದು ಅಧಿದೇವತೆ ಇರ್ತಾರೆ. ಹಾಸ್ಯರಸದ ಅಧಿದೇವತೆ ಗಣಪತಿ ಅಂತ ಎಲ್ಲೊ ಓದಿದ ನೆನಪು. ಯಾಕಿರಬಹುದು?

**ರಂಗನಾಥ:** ಗಣಪತಿಯ ಕಲ್ಪನೆಯಲ್ಲೆ ಒಂದು ರೀತಿಯ ವಿಪರ್ಯಾಸವಿದೆ. ಮನುಷ್ಯರ ದೇಹಕ್ಕೆ ಆನೆ ತಲೆ, ದೊಡ್ಡ ತಲೆಯಲ್ಲಿ ಸಣ್ಣ ಕಣ್ಣು, ಇಂಥ ವಿಪರ್ಯಾಸಗಳು ಪಕ್ಕನೆ ನಗೆ ಉಕ್ಕಿಸುತ್ತವೆ.

**ರತ್ನ:** ಅಷ್ಟೆ ಅಲ್ಲ ಮುತ್ತಣ್ಣ. ಗಣಪತಿಯ ಹಾಸ್ಯ ಮನೋಭಾವವನ್ನು ತೋರಿಸುವ ಹಲವಾರು ಕತೆಗಳಿವೆ. ಗಣಪತಿ ಚಿಕ್ಕ ಹುಡುಗನಾಗಿದ್ದಾಗ ಕೈಲಾಸದಲ್ಲಿ ನಡೆದ ಕತೆ ನಿಮಗೆ ಗೊತ್ತಿರಬಹುದು.

ಮುತ್ತಪ್ಪ: ಯಾವ ಕತೆ ಅದು? ನನಗೆ ಅಂಥಾ ಕತೆ ಯಾವುದೂ ಜ್ಞಾಪಕ ಇಲ್ಲ.

ರತ್ನ: ಥೂ. ನಾನು ಹೇಳೋದಿಲ್ಲಪ್ಪ (ನಗುವಳು)

ರಂಗನಾಥ: ಹೇಳೇ, ಅದಕ್ಯಾಕೆ ನಾಚಿಕೆ? ಹೋಗ್ಲಿಬಿಡು ನಾನೇ ಹೇಳ್ತೀನಿ. ಒಮ್ಮೆ ಕೈಲಾಸದಲ್ಲಿ ಶಿವಪಾರ್ವತಿ ಚಿಕ್ಕ ಮಗುವಾಗಿದ್ದ ಗಣಪತಿಯನ್ನು ತಮ್ಮ ನಡುವೆ ಕೂರಿಸಿಕೊಂಡು ಕುಳಿತಿದ್ರಂತೆ.

ರತ್ನ: ಈ ಮಕ್ಕಳು ಯಾವಾಗ್ಲೂ ಹಾಗೇ. ಅಪ್ಪ ಅಮ್ಮನ ನಡುವೆಯೇ ಕೂರೋದು.

ರಂಗನಾಥ: ಶ್, ಮಧ್ಯೆ ಬಾಯಿ ಹಾಕ್ಬೇಡ. ಶಿವಪಾರ್ವತಿ ಗಣಪತಿಯನ್ನ ನಡುವೆ ಕೂರಿಸಿಕೊಂಡ್ರಂತೆ. ಇದ್ದಕ್ಕಿದ್ದಂತೆ ಅವರಿಬ್ಬರಿಗೂ ಏಕಕಾಲದಲ್ಲಿ ತಮ್ಮ ಮುದ್ದು ಮಗುವಿನ ಗಲ್ಲಕ್ಕೆ ಒಂದು ಸಿಹಿ ಮುತ್ತು ಕೊಡಬೇಕು ಅನ್ನಿಸ್ತು. ಸರಿ, ಹಾಗೆ ಮಾಡಿದ್ರು. ಸ್ವಲ್ಪ ಹೊತ್ತಿನ ನಂತರ ಪುನಃ ಹಾಗೆ ಇಬ್ಬರೂ ಮುತ್ತು ಕೊಡ್ಲಿಕ್ಕೆ ಹೋದಾಗ – ಆ ಕಿಲಾಡಿ ಹುಡುಗ ಗಣಪತಿ ಪಕ್ಕನೆ ತನ್ನ ಮುಖವನ್ನ ಹಿಂದಕ್ಕೆ ಎಳಕೊಂಡನಂತೆ! (ಎಲ್ಲರೂ ನಗುವರು) ಆಗ ಏನಾಗುತ್ತೆ ಅಂದರೆ....

ಮುತ್ತಪ್ಪ: ಗೊತ್ತಾಯ್ತು ಕಣೋ. ಜೋಕನ್ನ ವಿವರಿಸಲಿಕ್ಕೆ ಹೋಗಬಾರದು. ಹಾಗೆ ಮಾಡಿದರೆ ಅದರ ಸ್ವಾರಸ್ಯ ಹಾಳಾಗುತ್ತೆ.

ರತ್ನ: ನಿಜ ಯಾರೋ ಒಬ್ರು ಒಂದು ಚುಟುಕವನ್ನ ಬರ್ದಿದ್ದಾರೆ.

ಪಟಾಕಿಯಂತೆ ಹಚ್ಚಿ ಎಸೆದು ಬಿಡಬೇಕು
ತಕ್ಷಣ ಸಿಡಿದರೆ ಅದು ಜೋಕು
ಸಿಡಿಯಲಿಲ್ಲ ಏಕೆ ಎಂದು ಕೆದಕೆ
ಸಿಡಿದೀತು ನಿಮ್ಮ ಮುಖಕ್ಕೆ Joke ಎ!

ಇಲ್ಲಿ ಜೋಕೆ ಎಂದರೆ ಕನ್ನಡದ ಜೋಪಾನವೂ ಹೌದು. ಇಂಗ್ಲೀಷ್‌ನ ಜೋಕ್ ಕೂಡಾ ಹೌದು.

ರಂಗನಾಥ: ಆದರೆ ಕೆಲವು ಸಲ ಜೋಕ್ ತುಂಬಾ ಚೆನ್ನಾಗಿದ್ದರೂ ಅದು ಕೆಲವರಿಗೆ ತಕ್ಷಣ ಅರ್ಥ ಆಗೋದಿಲ್ಲ. ಎಲ್ಲರೂ ನಗುವಾಗ ಅವರು ಕಣ್ಣು ಕಣ್ಣು ಬಿಡ್ತಾ ಇರ್ತಾರೆ. ಅಥವಾ ಎಲ್ಲರ ಜತೆ ಸುಮ್ಮನೆ ನಕ್ಕುಬಿಟ್ಟು ನಂತರ ಅದೇನೂ ಜೋಕು ಅಂತ ಪಕ್ಕದವರ ಹತ್ರ ಕೇಳ್ತಾರೆ. ಇಂಥ ಟ್ಯೂಬ್‌ಲೈಟ್ ಗಿರಾಕಿಗಳಿಗೆ ಏನ್ ಮಾಡಬೇಕು?

**ಮುತ್ತಪ್ಪ:** ಏನೂ ಮಾಡೋಕಾಗೊಲ್ಲ. ಇವತ್ತು ನಗದಿದ್ರೆ ಪರವಾಗಿಲ್ಲ. ನಾಳೇ ಅವರಿಗೆ ಜೋಕು ಅರ್ಥವಾಗಿ ನಗ್ತಾರೆ. ಅಂತ ನಮಗೆ ನಾವೇ ಸಮಾಧಾನ ಮಾಡ್ಕೊಬೇಕು.

**ರತ್ನ:** ಮೊನ್ನೆ ಆ ಸಭೆಯಲ್ಲಿ ಒಬ್ಬರು ಸರಿಯಾಗಿ ಹೇಳಿದ್ರು. ಹಾಸ್ಯವನ್ನು ಆಸ್ವಾದಿಸುವುದೂ ಒಂದು ಕಲೆ ಅಂತ. ತೀರಾ ಒರಟಾದ ಮತ್ತು ವಾಚ್ಯವಾದ ಹಾಸ್ಯ ಒಮ್ಮೆ ಎಲ್ಲರಿಗೂ ನಗುತರಿಸಬಹುದು. ಆದರೆ ಮತ್ತೆ ಮತ್ತೆ ಅವುಗಳನ್ನ ಕೇಳ್ತಾ ಇದ್ರೆ ಬೋರ್ ಆಗುತ್ತೆ. ಧ್ವನಿಪೂರ್ಣವಾದ, ಸೂಚ್ಯವಾದ ಹಾಸ್ಯ ಎಲ್ಲರಿಗೂ ಫಕ್ಕನೆ ಅರ್ಥವಾಗದೆ ಹೋಗಬಹುದು. ಆದರೆ ಗಮನವಿಟ್ಟು ಕೇಳಿ ಅರ್ಥಮಾಡಿಕೊಂಡರೆ ಅಂಥ ಹಾಸ್ಯದಿಂದ ಸಿಗುವ ಸಂತೋಷವೇ ಬೇರೆ. ಬಾಳೆಹಣ್ಣನ್ನು ನೀವು ಸುಲಿದುಕೊಡೋದಕ್ಕಿಂತ ನಾವೇ ಸುಲಿದು ತಿಂದರೆ ಹೆಚ್ಚು ರುಚಿ ಅಲ್ಲವೇನ್ರೀ?

**ರಂಗನಾಥ:** ಬಾಳೆಹಣ್ಣಾದ್ರೆ ನೀನು ಹೇಳಿದ್ದು ಸರಿ. ಆದರೆ ಹಲಸಿನ ಹಣ್ಣಾದ್ರೆ ನಾನು ಇದನ್ನ ಒಪ್ಪೋದಿಲ್ಲ. (ನಗು)

**ಮುತ್ತಪ್ಪ:** ಅಂತೂ ಮೂರ್ಖರ ದಿನಾಚರಣೆಯಲ್ಲಿ ಭಾಗವಹಿಸಿ ಸದಾ ನಗ್ತಾ ಇರಬೇಕು. ಅನ್ನೋ ನಿರ್ಧಾರ ಮಾಡಿದೀರಿ ಅಂತಾಯ್ತು. Wish you best of Joke!

**ರಂಗನಾಥ:** ಹೌದು ನಗು ನಗುತಾ ನಲಿ ನಲೀ ಏನೇ ಆಗಲಿ ಅನ್ನೋದೆ ಯಾವಾಗಲೂ ನಮ್ಮ ಮನೋಧರ್ಮ ಆಗಿದ್ರೆ ಈ ಚಿಂತೆ ಒತ್ತಡ, ಅದ್ರಿಂದಾಗಿ ಬಿ.ಪಿ. ಹೃದಯಬೇನೆ ಇವು ಯಾವುದೂ ಇರೋದಿಲ್ಲ.

**ಮುತ್ತಪ್ಪ:** ಆದರೆ ರಂಗಣ್ಣಾ ಎಲ್ಲವನ್ನೂ ಬದುಕಿನಲ್ಲಿ ಅಷ್ಟು ಲಘುವಾಗಿ ತೆಗೆದುಕೊಳ್ಳಲಿಕ್ಕೆ ಆಗೋದಿಲ್ಲ. ಇವತ್ತಿನ ಪರಿಸ್ಥಿತಿಯಲ್ಲಿ ನಮ್ಮ ಸುತ್ತಲೂ ಅನೇಕ ಜ್ವಲಂತ ಸಮಸ್ಯೆಗಳಿವೆ. ಅವುಗಳ ಬಗ್ಗೆ ನಾವು ಗಂಭೀರ ಚಿಂತನೆ ನಡೆಸದೆ ಯಾವಾಗಲೂ ನಗ್ತಾ ಇರೋಣ ಅಂದ್ರೆ ಅದು ಒಂದು ರೀತಿಯಲ್ಲಿ ಪಲಾಯನವಾದ ಆಗೋದಿಲ್ಲವಾ? ಜನರನ್ನ ನಗಿಸುತ್ತಿದ್ದ ಪ್ರಸಿದ್ಧ ವ್ಯಂಗ್ಯ ಚಿತ್ರಕಾರರೊಬ್ಬರು ಈಚೆಗೆ ಸಭೆಯೊಂದರಲ್ಲಿ ನನ್ನ ಹತ್ತಿರ ಈಗ ಹಾಸ್ಯದ ಬಾಣಗಳಿಲ್ಲ ಅಂತ ಅತ್ತುಬಿಟ್ಟರಂತೆ.

**ರಂಗನಾಥ:** ಇರಬಹುದು. ಆದರೆ ನನ್ನ ದೃಷ್ಟಿಯಲ್ಲಿ ಎಂತಹ ವಿಷಮ ಪರಿಸ್ಥಿತಿಯಲ್ಲೂ ನಗುವಿಗೆ ಸ್ವಲ್ಪವಾದರೂ ಜಾಗ ಇದ್ದೇ ಇರುತ್ತೆ. ಬ್ರಿಟೀಷ್ ಸಾಮ್ರಾಜ್ಯದ ವಿರುದ್ಧ ಹೋರಾಡುತ್ತಿದ್ದಾಗಲೂ ಕೂಡಾ ಮಹಾತ್ಮ ಗಾಂಧೀಜಿಯವರಲ್ಲಿ ಹಾಸ್ಯ ಪ್ರವೃತ್ತಿ ಇತ್ತು ಅನ್ನೋದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ.

**ರತ್ನ:** ಸಾಕು ಮಾರಾಯ್ರೆ ಸಾಕು. ಹಾಸ್ಯ ಬೇಕೇ ಬೇಡವೆ ಅನ್ನೋ ಬಗ್ಗೆ ನೀವು ಹೀಗೆ ವಾದ ಮಾಡ್ತಾ ಹೋದರೆ, ಹಾಸ್ಯ ಹಾರಿಹೋಗಿ ಪರಿಸ್ಥಿತಿ ಗಂಭೀರ ಆಗುತ್ತೆ.

**ಮುತ್ತಪ್ಪ:** ಇದರಲ್ಲಿ ವಾದ-ವಿವಾದದ ಪ್ರಶ್ನೆ ಇಲ್ಲ. ಹಾಸ್ಯ ನಗು ಬೇಡ ಅಂತಾ ನಾನು ಹೇಳಲಿಲ್ಲ. ಆದರೆ ಅದು ಹಿತ-ಮಿತವಾಗಿರಬೇಕು. ಊಟದಲ್ಲಿ ಉಪ್ಪಿನಕಾಯಿಯ ಹಾಗೆ.

**ರತ್ನ:** ಉಪ್ಪಿನಕಾಯಿ ಅಂದ ತಕ್ಷಣ ನೆನಪಾಯ್ತು. ಈ ವರ್ಷ ಉಪ್ಪಿನಕಾಯಿ ಮಿಡೀನೆ ಸಿಕ್ತಾ ಇಲ್ಲ. ನಿಮ್ಮನೇಲಿ ಉಪ್ಪಿನಮಿಡಿ ಹಾಕಿ ಆಯ್ತಾ?

**ರಂಗನಾಥ:** ಸುಮ್ನಿರೆ. ನಾವಿಲ್ಲಿ ಕಾಮಿಡಿ ಬಗ್ಗೆ ಮಾತಾಡ್ತಾ ಇದ್ರೆ ನೀನು ಉಪ್ಪಿನಮಿಡಿ ವಿಷಯ ಶುರುಮಾಡಿಬಿಟ್ಟೆಯಲ್ಲ. ಮುತ್ತಣ್ಣ ಮುಂದಿನ ಸಲ ನಮ್ಮ ಹಾಸ್ಯ ಸಂಘದ ಕಾರ್ಯಕ್ರಮಕ್ಕೆ ನೀನು ಬರಲೇಬೇಕು. ಸ್ವಪತ್ನೀಕನಾಗಿ... ಅಲ್ಲಲ್ಲ ಸಪತ್ನೀಕನಾಗಿ.

**ಮುತ್ತಪ್ಪ:** ಅದಕ್ಕೇನಂತೆ? ನಾನಂತೂ ಖಂಡಿತಾ ಬರ್ತೀನಿ. ನನ್ನ ಹೆಂಡತಿ ಏನು ಮಾಡ್ತಾಳೋ ಹೇಳೋಕಾಗೋಲ್ಲ.

**ರಂಗನಾಥ:** ಯಾಕೆ ಅವರು ನಗೋದಿಲ್ವಾ?

**ಮುತ್ತಪ್ಪ:** ಇಲ್ಲ ಅವಳ ಹಲ್ಲು ಚೆನ್ನಾಗಿಲ್ಲ. ನಕ್ಕರೆ ಹಲ್ಲು ಕಾಣುತ್ತೆ ಅನ್ನುವ ಭಯದಿಂದ ಆಕೆ ನಗೋದೆ ಕಡಿಮೆ.

**ರತ್ನ:** ಅದಕ್ಕೆ ಒಂದು ಉಪಾಯ ಇದೆ.

**ಮುತ್ತಪ್ಪ:** ಏನು?

**ರತ್ನ:** ಬಹಳ ಸುಲಭ. ಹಾಳಾಗಿರುವ ಹಲ್ಲುಗಳನ್ನ ಕೀಳಿಸಿ, ಒಳ್ಳೆಯ ಸೆಟ್ ಇಡಿಸಿದರಾಯ್ತು. ಆಮೇಲೆ ನೋಡಿ ನಿಮ್ಮ ಹೆಂಡತಿ ನಕ್ಕರೆ ಬೆಳದಿಂಗಳು ಚೆಲ್ಲಿದ ಹಾಗಿರುತ್ತೆ.

(ಎಲ್ಲರೂ ನಗುವರು)

---

ಆರ್.ಕೆ.ಲಕ್ಷ್ಮಣ್ ಅವರು 'ಕೊರವಂಜಿ' ಗೆ ರಚಿಸಿದ ವ್ಯಂಗ್ಯ ಚಿತ್ರದ ಮೂಲಪ್ರತಿ
(LAXMAN ORIGINAL)



" ಏನ್ಸಾರ್, ನಿಮ್ಮನ್ನ ನೋಡಿದರೆ ಪಾರ್ಕಿನ ಕುರ್ಚಿ ಮೇಲೆ ಕುಳಿತೆದ್ದು ಬಂದ ಹಾಗೆ ಕಾಣಿಸುತ್ತೆ "
– ಕೊರವಂಜಿ – ಅಕ್ಟೋಬರ್ 1943

ಶ್ರೀ ಆರ್.ಕೆ.ಲಕ್ಷ್ಮಣ್ ಅವರು 'ಕೊರವಂಜಿ' ಗೆ ರಚಿಸಿದ ವ್ಯಂಗ್ಯ ಚಿತ್ರದ ಮೂಲಪ್ರತಿ
(LAXMAN ORIGINAL)




" ನೋಡಿ ಸ್ವಾಮಿ, ನನ್ಮಗ ನಾಲ್ಕು ವರ್ಷ ಆಗ್ಲೇ ೨೦ತ್ರ ವರ್ಗ ಒಂದು, ಎರಡು ಹೇಳ್ತಾನೆ....."
" ಪರವಗಿಲ್ಲ, ೨೦ ವರ್ಷಕ್ಕೆ ೧೦೦೦ರ ವರ್ಗ ಕಲೀತಾನೆ....."

– ಕೊರವಂಜಿ – ಮಾರ್ಚ್ 1944

ಶ್ರೀ ಆರ್.ಕೆ.ಲಕ್ಷ್ಮಣ್ ಅವರು 'ಕೊರವಂಜಿ' ಗೆ ರಚಿಸಿದ ವ್ಯಂಗ್ಯ ಚಿತ್ರದ ಮೂಲಪ್ರತಿ
(LAXMAN ORIGINAL)



“ ಈ ಸ್ನೊ ಹಾಕಿದರೆ ಚರ್ಮ ಮೃದುವಾಗಿ, ನುಣುಪಾಗಿ ಅಂದವಾಗಿ ಆಗುತ್ತೆ ಅಂತ ಪೇಪರಿನಲ್ಲಿ •ಓದಿದ್ದೆ...”

– ಕೊರವಂಜಿ – ಅಕ್ಟೋಬರ್ 1943

# 'ಮನೆ ಬದಲಾಯಿಸಿ ನೋಡು'

ಕೃಷ್ಣ ಸುಬ್ಬರಾವ್

ಮನೆ ಕಟ್ಟಿನೋಡಬೇಕಾಗಿಲ್ಲ, ಮದುವೆ ಮಾಡಿ ನೋಡಬೇಕಾಗಿಲ್ಲ, ಮನೆ ಬದಲಾಯಿಸುತ್ತಿದ್ದರೆ ಸಾಕು, ಗಾದೆಗೆ ಮೂರನೇ ಆಂಗಲ್ (Third Angle) ಕಂಡುಕೊಳ್ಳಬಹುದು. ಮನೆಯಿಂದ ಮನೆಗೆ ಹೋಗಿ ವಾಸಿಸುವ ಬವಣೆ ವರ್ಗವಾಗುವ ಸಿಬ್ಬಂದಿ ವರ್ಗಕ್ಕೆ ಗೊತ್ತು. ಮನೆ ಬದಲಾಯಿಸುವಾಗ ಆಗುವ ದೈಹಿಕ ಕಸರತ್ತು, ಮನೆ ಹುಡುಕುವ ಕಷ್ಟ, ಬ್ರೋಕರ್ಸ್ ಸಹವಾಸ ಇತ್ಯಾದಿ ಅನಿವಾರ್ಯಗಳ ಬಗ್ಗೆ ನಾನೇನೂ ಹೇಳೊಲ್ಲ. ಏಕೆಂದರೆ ಅದೆಲ್ಲಾ ಎಲ್ಲರಿಗೂ ಗೊತ್ತಿದ್ದೇ ಬಿಡಿ. ನಾವ್ಯಾಕೆ ಮನೆ ಬದಲಾಯಿಸಿದ್ದು ಎಂದು ಕಾರಣವನ್ನು ನಮ್ಮ 'ಹಿತೈಷಿ'ಗಳಿಗೆ ಕನ್ವಿನ್ಸ್ ಆಗುವ ಹಾಗೆ ಹೇಳಲು ನಾವೆಷ್ಟು ಸಮರ್ಥರು ಎನ್ನುವುದು ನನ್ನ ಸಮಸ್ಯೆ.

ನಮ್ಮದೊಂದು ಪುಟ್ಟ ಸಂಸಾರ. ಒಬ್ಬಳೇ ಹೆಂಡ್ತಿ, ಒಂದೇ ಹೆಣ್ಮಗು. ಅದಕ್ಕೆ ಸರಿಯಾಗಿ ಒಂದು ಪುಟ್ಟ ಮನೆ ಬಾಡಿಗೆಗೆ ಹಿಡಿದೆ. ಕಾಲಕ್ರಮೇಣ ಜೀವನದ ಅಗತ್ಯಗಳು ಜಾಸ್ತಿಯಾಗಿ, ವಸ್ತುಗಳು ಜಾಸ್ತಿಯಾಗಿ ಮನೆ ಹೆಚ್ಚು ಹೆಚ್ಚು ಚಿಕ್ಕದಾಗುತ್ತಾ ಬಂತು. ಮನೆಗೆ ಬಂದವರು ಮನೆ ನೋಡಿ "ಬಹಳ ಕಾಂಪ್ಯಾಕ್ಟಾಗಿ ಚಿಕ್ಕದಾಗಿದೆ, ಒಳ್ಳೆ ಕಡ್ಡಿಪೊಟ್ಟಣದಂತೆ..." ಇತ್ಯಾದಿ ಹೊಗಳುತ್ತಾ ಹೋಗುತ್ತಿದ್ದರು. ನಮ್ಮನೆ ದೊಡ್ಡದಾಗಿದೆ ಬಹಳ ಚೆನ್ನಾಗಿದೆ ಎಂದು ಹೇಳುತ್ತಿದ್ದವರು ಪ್ರಪಂಚದಲ್ಲಿ ಇಬ್ಬರೆ. ಪ್ರತಿ ವರ್ಷ ಬಾಡಿಗೆ ಹೆಚ್ಚಿಸುತ್ತಿದ್ದ ನಮ್ಮನೆ ಮಾಲೀಕರು ಹಾಗು ನಮ್ಮನೆ ತೋರಿಸಿದ ಬ್ರೋಕರ್ ರಾಜು. ಈಗ ಅವರಿಬ್ಬರಲ್ಲಿ ಏಕಾಭಿಪ್ರಾಯವಿಲ್ಲವೆನ್ನಿ. ಈಗ ಅದೇ ರಾಜು "ಮನೆ ಬಹಳ ಚಿಕ್ಕದಾಯಿತಲ್ಲವೆ, ಬದಲಾಯಿಸಲ್ಲವೆ. ಮಗು ದೊಡ್ಡದಾಗುತ್ತಿದೆ.." ಎನ್ನುತ್ತಾನೆ. ಈ ರಾಜು ಅಭಿಪ್ರಾಯ ಸದಾ ಅದೇ ಆಗಿರೊಲ್ಲ. ನಾವು ಮನೆ ಬಿಡುವ ನಿರ್ಧಾರ ಮಾಡಿದ ಮೇಲೆ ಬೇರೆಯವರಿಗೆ ಮನೆ ತೋರಿಸುವಾಗ ನಮ್ಮನೆ ಬಹಳ ದೊಡ್ಡದಾಗುತ್ತೆ. ಅವನು ಹೇಳುವುದರಲ್ಲೂ ತಪ್ಪಿಲ್ಲ ಅನ್ನಿ. ಖಾಲಿ ಮನೆ ಯಾವಾಗಲೂ ದೊಡ್ಡದಾಗಿರುತ್ತೆ.

ಎಷ್ಟು ದಿನ ಅಂತ ಒಂದೇ ಸಮನೆ ಬೇರೆಯವರಿಂದ ಅನ್ನಿಸಿಕೊಳ್ಳುವುದು. ವಿಜಯಳಿಗೆ ರೇಗಿತು. "ಅಲ್ರಿ, ಈ ಛಾನ್ಸ್ ಬಿಟ್ಟರೆ ನಮಗೆ ಸಿಗೊಲ್ಲ. ಎದುರಮನೆ ಪದ್ಮ ನನಗೇ ಅವರ ಮನೆ ಭೋಗ್ಯಕ್ಕೆ ಕೊಟ್ಟಾರಂತೆ. ಕೇವಲ 1.5 ಲಕ್ಷವಂತೆ. ಐದು ವರ್ಷಕ್ಕೆ ಲೀಸ್ ಅಂತೆ. ಮನೆ ಬಹಳ ಚೆನ್ನಾಗಿದೆ ಬೇಕಾದರೆ ನೋಡಿ ಬನ್ನಿ"

ಎಂದಳು. ಹಣದ ಸಮಸ್ಯೆ ಬಿಟ್ಟರೆ ನನಗೆ ಇನ್ಯಾವ ಸಬೂಬು ಹೇಳಲು ಆಗಲಿಲ್ಲ. ಹಣದ ವ್ಯವಸ್ಥೆಗೆ ಮೂರು ನಾಲ್ಕು ಕಡೆ ಸಾಲ ಮಾಡಲು ಹಾಗೆ ಸಾಲ ಕೊಡುವವರ ಪಟ್ಟಿ, ತೀರಿಸುವ ಬಗ್ಗೆ ಎಲ್ಲ ಅವಳೇ ಹೇಳಿದ್ದರಿಂದ, ನಾನು ನಿರ್ಣಯ ತೆಗೆದುಕೊಳ್ಳಲು ಏನೂ ಉಳಿದಿರಲಿಲ್ಲ. ಪುಟ್ಟ ಮನೆಯಿಂದ ಅತಿ ವಿಸ್ತಾರದ ಮನೆ ಸೇರಿಕೊಂಡೆವು. ಒಂದು ರೂಂ ನಲ್ಲಿದ್ದ ನಮಗೆ ಮೂರು ರೂಂ. ಡೈನಿಂಗ್ ಬೇರೆ, ದೇವರಿಗೆ ಪ್ರತ್ಯೇಕ ಕೋಣೆ. ನನ್ನ ಮಗೂಗೆ ಆಟಕ್ಕೆ ಒಂದು ಕೋಣೆ ಎಂದರೆ ಅವಳ ಸಂಭ್ರಮ ಕೇಳಬೇಕೆ? ಮನೆ ಬದಲಾಯಿಸಲು ಲಾರಿ ಟೆಂಪೊ ಅಗತ್ಯವಿರಲಿಲ್ಲ. ಎಲ್ಲ ನಾವೇ ಬದಲಾಯಿಸಿದೆವು. ನನ್ನ ಹೆಂಡತಿಯು ಹಗುರವಾದ ವಸ್ತುಗಳನ್ನು ಆರಿಸಿಕೊಂಡು ಕೇವಲ ನಾಲ್ಕೈದು ಐಟಂಗಳನ್ನು ಮಾತ್ರ ನನಗೆ ಬಿಟ್ಟಳು. ಬೀರು, ಮಂಚ, ಟೇಬಲ್ etc.

ನೆರೆಹೊರೆಯವರು ಮನೆ ಹೇಗಿದೆ ಎಂದು ನೋಡುವ ಪ್ರಮೇಯವಿರಲಿಲ್ಲ. ಯಾವುದಾದರೂ ಅರಿಶಿನ-ಕುಂಕುಮಕ್ಕೆ ಆ ಮನೆಗೆ ಹೋಗಿ ನೋಡಿದ್ದರು. ಆದರೂ ನಾವು ಹೋದಮೇಲೆ ಹೇಗಿರುತ್ತೆ ಎಂದು ಕೆಲವು ಜನ ಬಂದು ಹೋದರು. "ಅಲ್ರಿ, ನೀವು ಅಷ್ಟೊಂದು ಹಣ ಏಕೆ ಬ್ಲಾಕ್ (Block) ಮಾಡಿಕೊಂಡ್ರಿ. ಅದನ್ನೇ ಬ್ಯಾಂಕಿನಲ್ಲಿಟ್ಟಿದ್ದರೆ, ಈಗ ಕಮ್ಮಿಯಾಗುತ್ತಿರುವ ಬಡ್ಡಿ ರೇಟಿನಲ್ಲೂ ಎಷ್ಟು ಬರುತ್ತಿತ್ತು. ಅನ್ಯಾಯ ಮಾಡಿದ್ರಿ. ಕಡೇ ಪಕ್ಷ ಒಂದು ಸೈಟ್ ತೆಗೆದುಕೊಂಡು ಎರಡು ವರ್ಷಕ್ಕೆ ಮಾರಿದ್ದರೆ ಒಂದಕ್ಕೆ ಎರಡು ಪಟ್ಟು ಲಾಭ ಬರುತ್ತಿತ್ತು. ನೀವು ಇರೋದು ಮೂವರೇ ನಿಮಗೆ ಆ ಮನೇನೆ ಚೆನ್ನಾಗಿತ್ತು. ಏಕೆ ಬೇಕಾಗಿತ್ತು ಇಷ್ಟು ದೊಡ್ಮನೆ" ಎಂದರು ಅನ್ನಪೂರ್ಣಮ್ಮ.

"ಅಲ್ರಿ, ಆ ಮನೆ ಚಿಕ್ಕದು ಅಂತ ನೀವೆ ಹೇಳುತ್ತಿದ್ದಿರಿ?" ಅಂದಳು ವಿಜಯ.

"ಹೇಳಿದ್ದೆ ನಿಜ ಆದರೆ ನೀವು ಇಷ್ಟು ಖರ್ಚು ಮಾಡಿ ಭೋಗ್ಯಕ್ಕೆ ಮನೆ ಮಾಡ್ತೀರಿ ಅಂತ ಯಾರಿಗೆ ಗೊತ್ತು?" ಸಮರ್ಥಿಸಿಕೊಂಡರು.

"ನೀವು ಈ ರೀತಿ ಭೋಗ್ಯಕ್ಕೆ ಮಾಡ್ತೀರಿ ಅಂತ ಗೊತ್ತಿದ್ದರೆ ನನ್ನ ನಾದಿನಿ ಮನೆಗೆ ಇನ್ನೂ ಚೀಪಾಗಿ ಕೊಡಿಸುತ್ತಿದ್ದೆ" ಎಂದು ಕಾಮಾಕ್ಷಮ್ಮ ಹೇಳಿದರು. ಅವರ ನಾದಿನಿ ಮನೆ ಇರೋದು ಶಿವರಾಸನ್ ಕುಂಟೇಲಿ. ನಮ್ಮ ಹುಡುಗಿ ಸ್ಕೂಲು ಇರೋದು ಬಸವೇಶ್ವರ ನಗರದಲ್ಲಿ. ಕಾಮಾಕ್ಷಮ್ಮನ ಆಫರ್‌ನ್ನು ಮುಂದಿನ ಸಲ ಪರಿಗಣಿಸುವುದಾಗಿ ವಿಜಯ ಆಶ್ವಾಸನೆ ನೀಡಿದಳು.

ನಮ್ಮ ಬಗ್ಗೆ ನಮ್ಮ ಹಣದ ಬಗ್ಗೆ, ನಮ್ಮ ಮನೆಯ ಬಗ್ಗೆ ಎಷ್ಟೆಲ್ಲಾ ಜನ ಎಷ್ಟೆಲ್ಲಾ ಯೋಚನೆ ಮಾಡ್ತಾರೆ ಅಂದ್ಕೊಂಡ್ರೆ ಎಷ್ಟು ಸಂತೋಷವಾಗುತ್ತೆ. ಮೊನ್ನೆ ನನ್ನ ಸೋದರತ್ತೆ ಬಂದಿದ್ರು ಅವರು ಒಳ್ಳೆ ವಿಮರ್ಶಕರು. ಮನೆಯೆಲ್ಲಾ ಕೂಲಂಕಶವಾಗಿ ನೋಡಿ "ನನಗೆ ಬಹಳ ಹಿಡಿಸಿತು ಈ ಮನೆ. ದೊಡ್ಮನೆ ಅಂತ ಹಾಲ್‌ನಲ್ಲಿ ಸೋಫ ಸೆಟ್, ಕಾರ್ಪೆಟ್ ಅಂತೆಲ್ಲ ಏನೇನೋ ತುಂಬಿಕೊಂಡು ಹಾಳು ಮಾಡಿಕೊಳ್ಳಬೇಡ. ದೊಡ್ಡ ಹಾಲಿನಲ್ಲಿ ಒಂದು ಚಾಪೆ ಹಾಕಿ ವಿಸ್ತಾರವಾಗಿ ಕುಳಿತುಕೊಂಡರೆ ಎಷ್ಟು ಹಿತ. ನನಗೆ ಫರ್ನಿಚರ್ ಕಂಡ್ರೆ ಆಗೊಲ್ಲ..." ಎಂದರು.

"ನಿಮ್ಮನೇಲಿ ಫರ್ನಿಚರ್ ಇಲ್ಲ – ಎಲ್ಲ ತೆಗೆದುಕೊಳ್ಳಬೇಕೆಂಬ" ಸೂಚನೆ ಇತ್ತಿದ್ದರು. ಅವರ ಕಟು ಟೀಕೆ ವಿಜಯಳಿಗೆ ಸಹಿಸಲಾಗದೆ "ಅಲ್ರಿ, ನೀವು ನಮಗೆ ಹೇಳ್ತಿರಲ್ಲಾ ನಿಮ್ಮನೇಲಿ ಆ ಪಾಟಿ ಫರ್ನಿಚರ್ ಹಾಕಿಕೊಂಡಿದ್ದರಲ್ಲ.." ಕೇಳಿಬಿಟ್ಟಳು.

"ಹೌದಮ್ಮ, ಏನ್ ಮಾಡೋದು. ನನ್ನ ಮಾತೆಲ್ಲಿ ಕೇಳ್ತಾರೆ. ಎಲ್ಲ ಮಕ್ಕಳು ಮೊಮ್ಮಕ್ಕಳ ರಾಜ್ಯಭಾರ..." ಎಂದು ರೆಡಿ ಉತ್ತರ ಕೊಟ್ಟರು. ನಮ್ಮ ಸೋದರತ್ತೆಯನ್ನು ಮಾತಿನಲ್ಲಿ ಗೆಲ್ಲಲಾಗದೇ ವಿಜಯ ಕಾಫಿ ಮಾಡಲು ಹೊರಟಳು.

"ನಿಮಗೆ ಈಗ ತುಂಬಾ ಕೆಲ್ಸವಲ್ಲವೆ? ನೀವು ಹಿಂದೆ ಕೊಡುತ್ತಿದ್ದ ಸಂಬಳಕ್ಕೆ ಈ ಮನೆ ಕೆಲ್ಸಾನೂ ಮಾಡ್ತಾಳಾ ರಾಜಿ ಕಡೇ ಪಕ್ಷ ಡಬ್ಬಲ್ ಸಂಬಳ ಕೇಳಿರಬೇಕಲ್ಲವೆ?" ಎಂದು ಎದುರುಮನೆ ರಂಗಮ್ಮ ಕೇಳಿದಾಗ ನಮಗೆ ಅರ್ಥವಾಯ್ತು ಅವರೇ ರಾಜಿಗೆ ಕಿವಿ ಹಿಂಡಿದ್ದಾರೆ ಅಂತ.

"ನಿಮಗೊಂದು ರೂಂ, ನಿಮ್ಮ ಪುಟ್ಟಿಗೊಂದು ರೂಂ, ಇನ್ನೊಂದು ರೂಂ ಖಾಲಿ ಬಿದ್ದಿರುತ್ತೆ, ಈಗ ನಿಮ್ಮ ಅತ್ತೆ ಬಂದ್ರೂ ಸರಿಹೋಗುತ್ತೆ.. ಅಂದ ಹಾಗೆ ನಿಮ್ಮ ಯಜಮಾನ್ರ ಔಷಧಿ ಇಡೋಕ್ಕೆ ಒಂದು ರೂಂ ಬೇಕಲ್ಲವೆ?" ಎಂದರು ಬೀದಿಯ ಕೊನೆಮನೆ ಇಂದ್ರಮ್ಮನವರು. ಅವರ ಮಾತು ಕೇಳಿಸಿಕೊಂಡವರು ಅಥವಾ ನಾನು ಮೆಡಿಕಲ್ Representative ಅಂತ ತಿಳಿಯದವರು, ನಾನು ಹಾಸಿಗೆ ಹಿಡಿದ ದೊಡ್ಡ ರೋಗಿ ಎಂದುಕೊಳ್ಳುವುದು ಖಚಿತ.

"ಎಲ್ಲಾ ಚೆನ್ನಾಗಿ ಕಟ್ಟಿದ್ದಾರೆ ಆದ್ರೆ ಅಡಿಗೆ ಮನೆ ತುಂಬಾ ಚಿಕ್ಕದಾಯಿತು" ಎನ್ನುತ್ತಾರೆ ಕೆಲವರು. ಯಾರೋ ಕಟ್ಟಿದ ಮನೆಗೆ ನಾವು ವಿವರಣೆ ಕೊಡಬೇಕಾಗುತ್ತೆ.

"ದೊಡ್ಡ ಕಲರ್ ಟಿ.ವಿ. ತೆಗೆದುಕೊಂಡರೆ ಈ ಹಾಲಿಗೆ ಚೆನ್ನಾಗಿರುತ್ತೆ. ಆ ಪುಟ್ಟ ಮನೇಲಿ ನೀವು ದೊಡ್ಡ ಬ್ಲಾಕ್ ಅಂಡ್ ವೈಟ್ ಇಟ್ಟುಕೊಂಡಿದ್ದಿರಿ, ಈಗ ದೊಡ್ಮನೆಗೆ ಬಂದ್ಮೇಲೆ ಚಿಕ್ಕ ಕಲರ್ ಟಿ.ವಿ. ತೆಗೆದುಕೊಂಡಿರಿ. ಒಂದು ಕೆಲ್ಸ ಮಾಡಿ

ಇದನ್ನ ಬೆಡ್ ರೂಂ ಗೆ ಹಾಕಿಕೊಳ್ಳಿ.." ಎಂದು ಸಲಹೆ ಕೊಡ್ತಾರೆ ಮೇಲಿನ ಮನೆಯವರು. ಈ ಯೋಚನೆಗಳೆಲ್ಲಾ ನಮಗೇ ಹೊಳೆಯುವುದೇ ಇಲ್ಲವಲ್ಲ ಅನ್ನಿಸುತ್ತೆ.

ಇದನ್ನೆಲ್ಲಾ ನೋಡಿದ್ರೆ ಏನ್ ಅನ್ನಿಸುತ್ತೆ ಗೊತ್ತಾ? ನಮ್ಮದೆ ಆದ ಸ್ವಂತ ಮನೆ ಕಟ್ಟಬೇಕು. ಜನರು ತಮ್ಮ ತಮ್ಮ ಅನಿಸಿಕೆ/ಅಭಿಪ್ರಾಯಗಳನ್ನು ಒಂದೇ ಒಂದು ಸಲ ಕೊಟ್ಟುಬಿಡ್ತಾರೆ. ಆದರೆ ಬಾಡಿಗೆ ಅಥವಾ ಭೋಗ್ಯದ ಮನೆಗೆ ಹೋಗುತ್ತಿದ್ದರೆ ಈ ಮಾತುಗಳನ್ನು ಕೇಳುತ್ತಿರಬೇಕು. ಈ ನನ್ನ ಅಭಿಪ್ರಾಯ ವಿಜಯಳಿಗೆ ತಿಳಿಸಿದರೆ ನನಗೆ ಬರುತ್ತೆ ಕುತ್ತಿಗೆಗೆ ಎಂದು ನಿಮಗೆ ತಿಳಿಸುತ್ತಿದ್ದೇನೆ. ಅವಳಿಗೆ ಹೇಳಿ ಬಿಡಬೇಡಿ!

ಮೊನ್ನೆ ಬೀದಿಲಿ ಐದಾರು ಮನೆಯಲ್ಲಿ ರಾತ್ರಿ ಪೆಟ್ರೋಲ್ ಕಳ್ಳತನವಾಯಿತು. ಆಗ ಕಷ್ಟಪಟ್ಟು ಪ್ರತಿನಿತ್ಯ ಸ್ಕೂಟರನ್ನು ತಳ್ಳಿ ಒಳಗೆ ಇಡುತ್ತಿದ್ದಾಗ ಎದುರ ಮನೆ ಲಕ್ಷ್ಮಿ "ನಿಮ್ಮನೆ ಹಾಲು ದೊಡ್ಡದಾಗಿದೆ ನಮ್ಮ ಯಜಮಾನ್ರು ಸ್ಕೂಟರ್ ಇಡುತ್ತಾರೆ ಅವರೇ ಎತ್ತಿ ಇಡುತ್ತಾರೆ" ಎಂದಳು.

"ಅಯ್ಯೋ ಬೇಡ, ನಿಮ್ಮ ಯಜಮಾನ್ರಿಗೆ ಸಂಕೋಚವಾಗಬಹುದು ಪ್ರತಿನಿತ್ಯ" ಎಂದಳು ವಿಜಯ.

"ಅದೆಲ್ಲ ಏನಿಲ್ಲ ಬಿಡಿ, ನಾವು ಹಿಂದೆ ಇದ್ದ ಮನೇಲಿ ಓನರ್ ಮನೇಲಿ ಇಡುತ್ತಿದ್ದೆವು. ನಾವು ರಾತ್ರಿ ಸಿನಿಮಾಕ್ಕೆ ಹೋಗಿ ಬಂದಾಗ ಅಥವಾ ಪಾರ್ಟಿಗೆ ಹೋಗಿ ಬಂದ್ರೆ ರಾತ್ರಿ ಹನ್ನೆರಡಾದರೂ ಪಾಪ ಬೇಜಾರಿಲ್ಲದೆ ಸ್ಕೂಟರನ್ನ ಅವರೇ ತೆಗೆದುಕೊಳ್ಳುತ್ತಿದ್ದರು.." ಎಂದು ತಮ್ಮ ಪೂರ್ವ ಚರಿತ್ರೆ ಬಿಚ್ಚಿದರು.

ಗಾಬರಿಯಾಗಿ ವಿಜಯ "ಈಗಲೂ ನೀವು ಸಿನಿಮಾಕ್ಕೆ ಪಾರ್ಟಿಗೆ ಹೋಗುತ್ತೀರಾ? ನಾವು ಬೇಗ ಮಲಗುತ್ತೇವೆ. ನಿಮಗೆ...."

"ಈಗೆಲ್ಲಿ ಹೋಗೋದು ನಮ್ಮ ಸಂಸಾರ ದೊಡ್ಡದಾಗುತ್ತಾ ಇದೆ. ಹೋದರೆ ನನ್ನ ಗಂಡ ಮಕ್ಕಳು ಹೋಗ್ತಾರೆ. ಬಹಳ ಒಳ್ಳೆ ಹುಡುಗರು. ಹೋಗುವಾಗ ಸುಮ್ಮನೆ ಬೀಗದ ಕೈ ತೆಗೆದುಕೊಂಡು ಹೋಗ್ತಾರೆ. ನಿಮ್ಮ ಪಾಡಿಗೆ ನೀವು ಮಲಗಿಕೊಳ್ಳಬಹುದು" ಎಂದಾಗ ವಿಜಯ ಸುಸ್ತು!

ಅದಕ್ಕೆ ಹೇಳೋದು 'ಮನೆ ಬದಲಾಯಿಸಿ ನೋಡು' ಅನ್ನೋದು.

---

# ರಕ್ತಪಾತ

ಕಮಲಾ ರಾಮಸ್ವಾಮಿ

ಮದುವೆ ದಿಬ್ಬಣ ಹೊತ್ತು ಹೊರಟಿದ್ದ ಬಸ್ಸು ಗಕ್ಕನೆ ನಿಂತಿತು.

"ಯಾಕೆ? ಏನಾಯ್ತು" ಎಲ್ಲರ ಉದ್ಗಾರ.

"ಟೆರರಿಸ್ಟ್ ಬಂದ್ರಾ ಅಜ್ಜಿ" ಐದು ವರ್ಷದ ಮೊಮ್ಮಗ ತೊಡೆಯ ಮೇಲಿಂದ ಜಿಗಿದು ಕೇಳಿದ.

"ಥೂ! ಯಾವಾಗಲ್ಲೂ ಇಂಥಾ ಮಾತೇ ಈ ಶನಿ?" ಅವರಮ್ಮ ಬೈದಳು. ಲಾಕರ್‌ನಲ್ಲಿದ್ದ ಇದ್ದ ಬದ್ದ ಒಡವೇನ ಪರ್ಸ್‌ನಲ್ಲಿ ತುಂಬಿಕೊಂಡು ಬಂದಿದ್ಳು. ಭಯ ಇರುಲ್ವೇ?

"ಮಗೂನ್ನ ಯಾಕೆ ಗದ್ರಸ್ತೀ? ಕೃಷ್ಣನ ಹಾಗಿರೋ ಈ ಕಂದಮ್ಮನ ಬೈಯೋಕೆ ಮನ್ಸಾದ್ರೂ ಹೇಗೆ ಬಂತೇ?" ಕೆಂಚಮ್ಮಜ್ಜಿ ಹಿಂದಿನ ಸೀಟಿನಿಂದ ನುಡಿದರು.

ಬಸ್ಸಿನಿಂದ ಅನಂತು, ರಂಗಣ್ಣ, ಕಂಠಿ ಎಲ್ಲಾ ಇಳಿದರು. ಬೀಗರ ಕಡೆಯಿಂದ ಬಂದಿದ್ದ ನಂಜುಂಡಯ್ಯ ಗಾಬ್ರಿಯಿಂದ ಇಳಿದರು.

"ಪೋಲಿಸ್ ಜೀಪ್ರು, ಕಾರು, ಹಿಂದೇನೇ ಬಂದು ಡ್ರೈವ್ರರ್‌ಗೆ ನಿಲ್ಸಕ್ಕೆ ಹೇಳಿದ್ರಂತೆ. ಅದಕ್ಕೇ ಆತ ನಿಲ್ಸದ".ಹಿಂದೆಯೇ "ವಯ್ ವಯ್" ಸೈರನ್ ಕೇಳಿಸ್ತು "ಏನು ಗ್ರಹಚಾರವಪ್ಪಾ" ನಂಜುಂಡಯ್ಯನವರು ನಂಜುಂಡಂತೆ ಚಡಪಡಿಸಿದರು.

ಕಾರಿನಿಂದ ಇಳಿದ ಪೋಲಿಸ್ ಅಧಿಕಾರಿ ಅಲ್ಲೇ ನಿಂತಿದ್ದ ಅನಂತುವಿನ ಭುಜದ ಮೇಲೆ ಕೈಹಾಕಿದ. "ಅಲ್ವೋ, ಚೆನ್ನರಾಯಪಟ್ನದಿಂದ ಫಾಲೋ ಮಾಡ್ಕೊಂಡು ಬಂದೇ. ಮಗನ ಮದ್ವೇಗೆ ಬರೋಕಾಗೋಲ್ಲ. Special Duty ಮಹಾ ಮಸ್ತಕಾಭಿಷೇಕ. ರಜಾ ಸಿಗಲ್ಲ ಕಣೋ. ಇಲ್ಲೇ ಎಲ್ಲರ್ನೂ ಮೀಟ್ ಮಾಡೋಣ ಅಂತ ಹಿಂದೇನೇ ಬಂದೆ". ಬಂದವನು ಪುರುಷೋತ್ತಮ, ಅನಂತುವಿನ ಬಾಲ್ಯ ಸ್ನೇಹಿತ. "ಸಧ್ಯ ಇನ್ನೇನೂ ಗಲಾಟೆ ಇಲ್ಲಲ್ವಾ ದೇವರ ದಯೆ! ಕೆಂಚಮ್ಮಜ್ಜಿ ಕೂತ ಕಡೆಯಿಂದಲೇ ಕಾಣದ ದೇವ್ರಿಗೆ ಕೈ ಜೋಡಿಸಿದ್ರು. ಮರಿ ಮಗನ ಮದ್ವೆ ನೋಡುವ ಆಸೆ ಅವ್ರಿಗೆ. ಪೋಲೀಸ್ ಜೀಪ್ರು, ಕಾರು 4-5 ಪೋಲೀಸ್ ಪ್ಯಾದೆಗಳನ್ನು ನೋಡಿದ ಮೊಮ್ಮಗನಿಗೆ ಗಾಬರಿ ಆಯ್ತು ಅಂತ ಕಾಣುತ್ತೆ. ತೊಡೆಯೇರಿ ಕುಳಿತ. ಪಿಳಿ ಪಿಳಿ ಕಣ್ಣು ಬಿಟ್ಟು ಕಿಟಕಿ ಆಚೆ ನೋಡ್ತಾ ಇದ್ದ.

"ಅಲ್ವೋ! ಹಾಗೆ ರೂಟ್ ಮಾಡ್ತೀನಿ, ಹೀಗೆ ಕತ್ತರಿಸಿ ಬಿಡ್ತೀನಿ ಅಂತ ಅಮ್ಮನ ಮುಂದೆ ಕೊಚ್ಕೋತಾ ಇದ್ದೆ. ಈಗ್ಯಾಕೆ ಅಜ್ಜಿತೊಡೆ ಮೇಲೆ ಕೂತೆ" ಮಗಳು ಛೇಡಿಸಿದ್ಳು.

"ಸುಮ್ನಿರೇ ಸಾಕು! ಅದ ಕಂದಮ್ಮನ ಮೇಲೆ ನಿನ್ನ ರೋಪು! ಎಲ್ಲಾರ್ಗೂ ಗಾಬ್ರಿಯಾಯ್ತು. ಪಾಪ! ಅದು ಅಂದ ಹಾಗೇ ಯಾವ ಟೆರರಿಸ್ಟೋ, ಇನ್ನೇನು ರಕ್ತಪಾತವೋ ಅಂತ .....". ಕೆಂಚಮ್ಮ ಮುಗಿಸುವಷ್ಟರಲ್ಲಿ, ಮೊಮ್ಮಗ ಕೇಳಿದ.

"ರಕ್ತಪಾತ ಅಂದ್ರೇನು ಅಜ್ಜಿ"

"ರಕ್ತ ನೀರಿನ ಹಾಗೆ ಚಿಮ್ಮಿ ಹರಿದರೆ ರಕ್ತಪಾತ ಅಂತಾರೆ. ಜೋಗ್‌ನಲ್ಲಿ ಬೀಳುವ ನೀರಿಗೆ "ಜಲಪಾತ" ಅನ್ನೋಲ್ವೆ, ಹಾಗೆ"

"ರಕ್ತಪಾತ ಯಾವಾಗ ಆಗುತ್ತೆ ಅಜ್ಜಿ"

"ಯುದ್ಧ, ಕಾಳಗ ಆದಾಗ್ಲೆಲ್ಲಾ ಆಗುತ್ತಪ್ಪ. ಒಬ್ಬರ್‍ನೊಬ್ಬರು ಹೊಡೆದು ಕೊಂಡಾಗ ಆಗುತ್ತೆ"

"ಕಲಿಯುಗ ಪುಟ್ಟಾ! ಈಗಂತೂ ಬೀದಿ ಬೀದೀಲಿ ಕಾರಣ ಇಲ್ದೇ ಆಗೋದಕ್ಕೆ ಶುರುವಾಗಿದೆ. ಬೊಂಬಾಯಿ ಬಾಂಬ್ ಗದ್ಲ ನೋಡಿದ್ಯಾ!" ಕೆಂಚಮ್ಮಜ್ಜಿ ಶುರು ಮಾಡಿದ್ರು.

"ಕಲಿಯುಗ ಅಂದ್ರೇನು?"

"ನಾವಿರೋದೆ ಈ ಕಲಿಯುಗ. ಹಿಂದೆ ಇದ್ದದ್ದು ಕೃತಯುಗ, ತ್ರೇತಾಯುಗ ಮತ್ತು ದ್ವಾಪರಯುಗ" ಕೆಂಚಮ್ಮಜ್ಜಿ ವಿಷದೀಕರಿಸಿದ್ರು. ಎಲ್ಲರಿಗೂ ಎಳೆನೀರು ಕುಡಿಸಿದ ಪುರುಷೋತ್ತಮ ಶುಭ ಕೋರಿ ನಮ್ಮನ್ನು ಗೊರೂರಿಗೆ ಬೀಳ್ಕೋಟ್ರು.

ಮೊಮ್ಮಗ ಕೆಂಚಮ್ಮಜ್ಜಿ ತೊಡೆ ಏರಿದ

"ಕೃತಯುಗ ಅಂದ್ರಲ್ಲಾ ಆವಾಗೇನಾಯ್ತು ಮುತ್ತಜ್ಜಿ"

"ಆಗ್ಲೇ ಆಗಿದ್ದು ಪ್ರಹ್ಲಾದನ ಕಥೆ. ನಿಂಗೆ ನಿಮ್ಮಜ್ಜಿ ಹಿರಣ್ಯಾಕ್ಷ

ಹಿರಣ್ಯ ಕಶಿಪು ಕಥೆ ಹೇಳಿಲ್ವೇ?"

"ಹೂಂ ಗೊತ್ತಜ್ಜಿ. ಅದೇ ನರಸಿಂಹವತಾರದ ಕಥೆ".

"ಆಮೇಲೆ ತ್ರೇತಾಯುಗ, ರಾಮರಾಜ್ಯ. ಜನಕ ಮಹಾರಾಜನಂತಹ ಜ್ಞಾನಿ, ಪಿತೃಭಕ್ತಿ ಪರಿಪಾಲಕ ರಾಮ, ಪತಿವ್ರತೆ ಸೀತೆ – ಗೊತ್ತಿಲ್ವೆ ಕಂದಾ ರಾಮಾಯಣ"

"ಗೊತ್ತು ಗೊತ್ತು, ಟಿ.ವೀಲೂ ನೋಡಿದ್ವಿ"

"ಆಮೇಲೆ ದ್ವಾಪರ. ಮಹಾಭಾತರದ ಕಥೆ ಅರ್ಜುನ, ಭೀಮ, ಕೃಷ್ಣ ಕುರುವಂಶದ ದುರ್ಯೋಧನ ......"

"ಅದೂ ಟಿ.ವೀಲಿ ಬಂದಿತ್ತು. ನಾನು ನೋಡ್ದೆ".

"ಬಲು ಜಾಣಮರಿ. ಎಲ್ಲಾ ಗೊತ್ತಲ್ಲಮ್ಮಾ ನಿಂಗೆ". ದೃಷ್ಟಿ ತೆಗೆದು ನೆಟಿಕೆ ಮುರಿದರು ಮುತ್ತಜ್ಜಿ.

"ಹಾಗಾದ್ರೆ ಯಾವಾಗ್ಲೂ ನಡೆದಿದ್ದೇ ಈ ರಕ್ತಪಾತ. ಆಗ, ರಾಕ್ಷಸರು, ದೇವತೆಗಳು, ಕಪಿಗಳು, ಅಂತೆಲ್ಲಾ ಅಂದ್ರು. ಕುರುಕ್ಷೇತ್ರದಲ್ಲಿ ಈಗ್ಲೂ ಮಣ್ಣು ಕೆಂಪಗಿದೆ ಅಂತಾರೆ, ರಕ್ತದ ಕೋಡಿ ಹರಿದು. ಯಾವಾಗ್ಲೂ ಇದ್ದದ್ದೇ ಇದು. ಇನ್ನು ಕಲಿಯುಗ ಏನು ಪಾಪ ಮಾಡಿತ್ತು ರಕ್ತದ ಕೋಡಿ ಹರೀದೇ ಇರೋಕ್ಕೆ" ಒಂಭತ್ತು ವರ್ಷದ ಮುನ್ನ ತಿರುಗಿ ಬಿದ್ದ. ಎಲ್ಲಾ ಕೇಳಿಸಿಕೊಂಡು ಡಿ.ವಿ.ಜಿ.ಯವರ ನೆನಪು ಬಂತು.

"ಹಳೆಯ ಭಕ್ತಿಶ್ರದ್ಧೆಯಳಿಸಿ ಹೋಗಿದೆ ಮಾಸಿ।
ಸುಳಿದಿಲ್ಲವಾವ ಹೊಸ ದರ್ಶನದ ಹೊಳಪುಂ॥
ಪಳಗಿದ್ದ ಮನೆ ಬಿದ್ದ ಕುಂಟ ಕುರುಡನ ತೆರದಿ।
ತಳಮಳಿಸುತಿದೆ ಲೋಕ" – ಮಂಕುತಿಮ್ಮ!!

---

# ದಾಖಲೆ

ತಲೆ ಕೂದಲನ್ನೆಲ್ಲ ಬಾಚಿ
ಎದುರು ಮನೆ ಬಾಚಿ
ಹಣೆಗೆ ಬೆಳಕಿಗೆ ಹಿಡಿದಳು
ಒಂದೊಂದೆ ಕೂದಲ ತೆಗೆದಳು
ಎಣಿಸಿ ಎಣಿಸಿ ಹಣ್ಣಾದಳು
ಗಿನ್ನಿಸ್ ಬುಕ್‌ನಲ್ಲಿ ದಾಖಲಾದಳು

ವೇಣುಗೋಪಾಲ ಸೊರಬ

# ಪ್ರಚಾರ

**ಕಂಭಂ. ಕೃಷ್ಣಮೂರ್ತಿ**

ಆದರ್ಶವಾದಿ, ಕಟ್ಟಾ ಗಾಂಧಿವಾದಿ, ಭ್ರಷ್ಟಾಚಾರ ಅನಾಚಾರಗಳ ಕಡುವೈರಿ, ಶಾಲಾ ಮಾಸ್ತರು ಅಡವೆಪ್ಪನವರನ್ನು ನೂತನ ಮಂತ್ರಿ ಮಂಡಳಕ್ಕೆ ಸೇರಿಸಿಕೊಂಡಾಗ ಮಿಕ್ಕ ಸಚಿವರುಗಳೆಲ್ಲಾ ಒಂದೇ ತಕರಾರು ಮಾಡಿದರು. "ಆ ಸ್ಪೆಸಿಮನ್ನನ್ನು ಸಂಪುಟಕ್ಕೆ ಯಾಕೆ ಸ್ವಾಮಿ ಸೇರಿಸಿಕೊಂಡ್ರಿ" ಎಂದು ಮುಖ್ಯಮಂತ್ರಿಗಳನ್ನು ಅಟಕಾಯಿಸಿಕೊಂಡರು."ಇರ್‍ಲಿ ಬಿಡಿ. ಇಂಥೋರು ಒಂದೆಳ್ಡು ಮಂದಿ ಸ್ಟಾಂಪಲ್ಗೆ ಇರೋದು ಒಳ್ಳೇದು. ನಮ್ಮ ಆಟಕ್ಕೆ ಒಂದು ಅಂಕದ ಪರ್ದೆ ಇದ್ದಾಂಗೆ. ಯಾವ್ದಾರ ನಿರುಪಯೋಗಿ ಖಾತೇನ ವಹಿಸಿಕೊಟ್ರಾತು ಬುಡಿ. ನೀವ್ಯಾಕೆ ಕಾಳಜಿ ಮಾಡ್ತೀರಿ..." ಎಂದು ಚೀಫು ಹೇಳಿದಾಗ ಮಿಕ್ಕವರು ತೆಪ್ಪಗಾದರು.

ತಮಗೆ ಸಚಿವ ಸ್ಥಾನ ದೊರಕಿದ್ದುದರಿಂದ, ದೀನದಲಿತರ ಸೇವೆಗೆ ಬಲಯುತವಾದ ಅವಕಾಶ ಸಿಕ್ಕಿತೆಂದು ಅಡವೆಪ್ಪನವರು ಹಿಗ್ಗಿದರು. ಸಮಾಜ ಸೇವೆಗೆ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡರು. ಮಾಸ್ತರ ಭಾಮೈದ ದುಂಡೇಶಿಗೆ, ಭಾವನ ಆದರ್ಶಗಳು ಸುತರಾಂ ಹಿಡಿಸಿರಲಿಲ್ಲ. ಅವರು ಸಚಿವ ಸ್ಥಾನದಲ್ಲಿದ್ದೂ ಯಾವ ರೀತಿಯ ವರ್ಚಸ್ಸನ್ನೂ ಬೀರದೆ, ಬಿಡಿ ಸನ್ಯಾಸಿಯಂತೆ ಸಮಾಜಸೇವೆ ಮಾಡುತ್ತಿದ್ದುದು ಅವನಿಗೆ ನುಂಗಲಾರದ ತುತ್ತಾಗಿತ್ತು. ಅಕ್ಕನನ್ನು ಛೂ ಬಿಟ್ಟು ಭಾವನನ್ನು ಹದಮಾಡಲು ಹವಣಿಸಿದ. ಆದರೆ ಅಡವೆಪ್ಪನವರು ರಾಮನಗರದ ಬಂಡೆಯಂತೆ ತಮ್ಮ ಆದರ್ಶಗಳಿಂದ ವಿಚಲಿತರಾಗದೆ ಸ್ಥಿರವಾಗಿದ್ದರು.

"ಹೀಂಗಾದರೆ ಹ್ಯಾಂಗೆ ಭಾವಾಜಿ. ನೀವು ಸಚಿವರಾಗಿರೋದೆ ಅನೇಕ ಮಂದಿಗೆ ತಿಳಿದಿಲ್ಲ. ಸಭೆ, ಸಮಾರಂಭ, ಸನ್ಮಾನ ಯಾವ್ದೂ ಬ್ಯಾಡಾಂತ ಹೀಂಗ ಮೂಲ ಹಿಡ್ದು ಕುಂತರೆ ಹ್ಯಾಂಗೆ ಅಂತೀನಿ. ಈಗಿನ ಕಾಲದಾಗೆ ಪ್ರಚಾರ ಇಲ್ದಿದ್ರೆ ಮುಂದಿನ ಇಲೆಕ್ಷನ್ನಾಗೆ ಗೆದ್ದು ಹ್ಯಾಂಗ್ರೀಯಪ್ಪ ಬರ್ತೀರಿ ನೀವೆ ಹೇಳ್ರಿ..." ಎಂದು ಒಂದು ದಿನ ಮಾಸ್ತರನ್ನು ತಹವಿಕೊಂಡಿದ್ದ ದುಂಡೇಶಿ.

"ನೋಡಪಾ, ಈ ಪ್ರಚಾರ, ಹೊಗಳಿಕೆಯೆಲ್ಲಾ, ನನಗೆ ಹಿಡಿಸೋದಿಲ್ಲ, ಜನರ ಸೇವಾ ಮಾಡ್ಲಿಕ್ಕೆ ಪ್ರಚಾರ ಯಾಕೆ ಬೇಕೋ ದುಂಡೇಶಿ. ಮಂದಿಗೆ ನಮ್ಮ ಸೇವಾ ಹಿಡಿಸಿದರಾತು, ಮುಂದಿನ ಇಲೆಕ್ಷನ್ನಾಗೆ ಅವರೆ ನಮ್ಮನ್ನ ಆರಿಸ್ತಾರೆ ಹೌದಲ್ಲೋ. ನೀನು ಇದರ ಕಾಳಜಿ ಬಿಡು" ಎಂದು ಮಾಸ್ತರು ಹಿತೋಪದೇಶ ಮಾಡಿದರು.

''ಈ ಕಾಲದಾಗ ಹಾಂಗೆಲ್ಲಾ ನಿಸೂರಾಗಿ ನಡೆಯೋದಿಲ್ರಿ ಭಾವಾಜಿ. ಪ್ರೆಸ್ ಕಾನ್‌ಫರೆನ್ಸು, ಟಿ.ವಿ. ಅಂತ ಹತ್ತಾರು ಕಡೆಯಿಂದ ಪ್ರಚಾರ ಗಿಟ್ಟಿಸಿಕೋ ಬ್ಯಾಕ್ರಿ. ನಿಮಗ ಬ್ಯಾಡದಿದ್ರ ನಂಗ ಬ್ಯಾಕ್ರಿ. ನಮ್ಮ ಅಕ್ಕಂಗ ಬ್ಯಾಕ್ರಿ. ನೀವು ಬ್ಯಾಡಾನ್ನಬ್ಯಾಡಿ ಮತ್ತ. ನಾನು ಇದರ ವ್ಯವಸ್ಥಾನೆಲ್ಲಾ ಮಾಡ್ತೀನಿ..'' ಎಂದು ದುಂಬಾಲು ಬಿದ್ದ ದುಂಡೇಶಿ.

''ಅಲ್ಲಪಾ ಮಂತ್ರಿ ಆಗಿರೋದು ನೀನಾ, ನಿನ್ನಕ್ಕನ, ನಾನ್ತಾನೆ ಆ ಸ್ಥಾನದಾಗೆ ಇರೋವಾತ. ನನಗೆ ಇದ್ಯಾವುದು ಹಿಡಿಸೂಹಾಂಗಿಲ್ಲ. ನೀನು ಇಲ್ಲದ ಚಾಪ್ಟಿ ಮಾಡ್ಲಿಕ್ಕೆ ಹತ್ತಬ್ಯಾಡ..'' ಎಂದು ಖಂಡತುಂಡವಾಗಿ ಹೇಳಿ ಭಾವ ಮೈದುನನನ್ನು ತೆಪ್ಪಗಾಗಿಸಿದರು.

ಇಂಥಹ ಆದರ್ಶವಾದಿಗೆ ಯಾವ ರೀತಿಯಲ್ಲಿ ಪ್ರಚಾರ ಗಿಟ್ಟಿಸಬಹುದು ಎಂಬುದೇ ಅವನಿಗೆ ಕಟು ಸಮಸ್ಯೆಯಾಯಿತು. ಈ ರೀತಿ ಸಚಿವರು ಎಲೆಮರೆಯ ಕಾಯಿಯಂತೆ ಕುಳಿತರೆ, ತಾನು ಸಚಿವರ ಭಾವಮೈದ ಅಂತ ಹೆಮ್ಮೆಯಿಂದ ಹೇಳಿಕೊಂಡು ತಿರುಗಾಡಲು ಸಾಧ್ಯವೆ? ತನ್ನ ಮಾತಿಗೆ ಬೆಲೆಯಿರುತ್ತದೆಯೆ. ತನ್ನ ಭಾವಾಜಿ ಒಪ್ಪುವಂತಹ ಪ್ರಚಾರ ಮಾಧ್ಯಮವನ್ನು ಅವನು ಯೋಚಿಸುತ್ತಲೇ ಇದ್ದ. ಕಡೆಗೆ ಅವನ ತಲೆಗೆ ಹೊಳೆದ ಒಂದು ಕೆಲಸವನ್ನು ಮಾಡಲು ಸಿದ್ಧನಾದ.

''ಭಾವಾಜಿ ನೀವು ಜನ ಸೇವಾಂತ ಬಾಯಾಗ ಒದರಿದರೇನಾತು. ಮಂದಿಯ ಕುಂದು ಕೊರತೆ ಎಂಥದು ಅಂಬೋದು ನಿಮಗ ಹ್ಯಾಂಗ ತಿಳಿದಾತು ಹೇಳ್ರಿ. ದೊಡ್ಡ ಸ್ಥಾನದಲ್ಲಿರೋ ನಿಮ್ಮ ಕಿವಿಮ್ಯಾಗೆ ಮಂದಿಯ ಕಷ್ಟ ಸುಖದ ವಿಷಯ ಹ್ಯಾಂಗೆ ಬೀಳ್ತದೆ. ಆದಕ್ಕೆ ನೀವೇ ಮಫ್ತೀಲಿ ಹೋಗ್ರಿ, ಖುದ್ದು, ಮಂದಿಯ ಕಷ್ಟ ಸುಖಾನ ವಿಚಾರಿಸಿರಿ. ಅದಕ್ಕೆ ಪರಿಹಾರ ಮಾಡ್ಕೊಡಿ. ಆಗ ಅದು ದಿಟವಾದ ಜನಸೇವಾ ಆಗ್ತದ ನೋಡ್ರಿ..'' ಎಂದು ದುಂಡೇಶಿ ಪೀಠಿಕೆ ಹಾಕಿದ.

ಮಾಸ್ತರು ಅಡವೆಪ್ಪನವರಿಗೂ ಅವನ ವಾದ ಹಿಡಿಸಿತು. ''ತಾವು ಸಚಿವರಾಗಿ ಪರಿಶೀಲನೆಗೆ ಹೋದರೆ ಜನಸಾಮಾನ್ಯರ ಕಷ್ಟ ಸುಖಗಳ ಯಥಾಸ್ಥಿತಿಯನ್ನು ತಿಳಿಯಲು ಸಾಧ್ಯವಾಗದೆ ಹೋಗಬಹುದು. ಆದ್ದರಿಂದ ಮಫ್ತಿಯಲ್ಲಿ ಶ್ರೀಸಾಮಾನ್ಯನಂತೆ ಹೋಗಿ, ಜನರ ಕುಂದು ಕೊರತೆಗಳನ್ನು ತಿಳಿಯುವುದೇ ಒಳಿತು'' ಎಂಬ ನಿರ್ಧಾರಕ್ಕೆ ಅವರು ಬಂದರು.

''ಹೌದಪಾ ದುಂಡೇಶಿ ನೀ ಅಂಬೋದು ಖರೇನೆ ಅದ. ಮತ್ತ ಹ್ಯಾಂಗೆ ಆರಂಭ ಮಾಡೋಣಾಂತ ತಿಳೀವಲ್ಲದಲ್ಲಪಾ...'' ಎಂದು ಮಾಸ್ತರು ಹೇಳಿದಾಗ ''ಯಾಕೆ ಸಾರಿಗೆ ಬಸ್ಸಿಂದ ನೀರು ಸುರು ಹಚ್ರಿ, ಮಂದೀ ಕಷ್ಟ ತಿಳೀವಲ್ಲದ್ಯಾಕೆ'' ಎಂದ ದುಂಡೇಶಿ.

ಜನತಾ ಕಾರ್ಯದಲ್ಲಿ ವಿಳಂಬವನ್ನು ಸಹಿಸದ ಸಚಿವರು ತಕ್ಷಣವೇ ಕಾರ್ಯೋನ್ಮುಖರಾದರು. ಸಾಮಾನ್ಯ ರೈತನ ವೇಶವನ್ನು ಧರಿಸಿ, ಬಸ್ ಸ್ಟಾಪಿನಲ್ಲಿ ನಿಂತರು. ಬಸ್ಸಿಗಾಗಿ, ಸಂತೆಯಲ್ಲಿ ಸೇರುವಂತೆ ಜನರು ಗಿರಗಾಯಿಸಿದ್ದರು. ವೇಳಾ ವೇಳೆಗೆ ಬಸ್ಸುಗಳು ಬರದೆ ಇರುವುದನ್ನು ಸಚಿವರು ಗಮನಿಸಿದರು. ಕಾಗೆಯಂತೆ ತಾಸುಗಟ್ಟಲೆ ಕಾದು ನಿಂತಿರುವಾಗ, ಯಾವುದೋ ಒಂದು ಬಸ್ಸು ಎಲ್ಲಿಂದಲೋ ವೇಗವಾಗಿ ಬಂದು, ಎಲ್ಲಿಯೋ ನಿಂತುಕೊಂಡಿತು. ಬಸ್‌ಸ್ಟಾಪಿನಲ್ಲಿ ನಿಂತಿದ್ದ ಮಂದಿ, ಹೆಂಗಸರು, ಮಕ್ಕಳು, ಮುದುಕರೆನ್ನದೆ 'ಹೋ' ಎಂದು ಅರಚುತ್ತಾ ಬಸ್ಸನ್ನು ಹಿಡಿಯಲು ಓಡಿದರು. ನುಗ್ಗಾಟ, ಕಿತ್ತಾಟಗಳ ನಡುವೆ ಅಡವೆಪ್ಪನವರು ಹೇಗೋ ಬಸ್ಸಿನೊಳಕ್ಕೆ ತೂರಿಕೊಂಡಿದ್ದರು. ಬಸ್ಸು ಪ್ರಯಾಣಿಕರಿಂದ ತುಂಬಿ ತುಳುಕಿತು. ಫುಟ್‌ಬೋರ್ಡಿನ ಮೇಲೆ ಕಾಲಿಡಲೂ ಸಹ ಸ್ಥಳವಿಲ್ಲದೆ, ಪ್ರಯಾಣಿಕರು ಬಸ್ಸಿನ ಕಂಬಿಗಳನ್ನು ಹಿಡಿದು ನೇತಾಡುತ್ತಿರುವಂತೆಯೆ ಡೀಸಲ್ ಶಕಟ ಮುಂದಕ್ಕೆ ಧಾವಿಸಿತು.



ಸಚಿವರು ಬಸ್ಸಿನ ಒಳಗಡೆ ಪ್ರಯಾಣಿಕರ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡಿದ್ದರು. ಉಸಿರು ಕಟ್ಟುವ ಪರಿಸ್ಥಿತಿ, ಈ ಮಧ್ಯೆ ಕಂಡಕ್ಟರು ಅವರಿವರನ್ನು ಬದಿಗೆ ತಳ್ಳುತ್ತ ಹಾದಿ ಮಾಡಿಕೊಂಡು ಚೀಟಿ ಹಂಚುತ್ತಿದ್ದ. ಬೂಟು ಕಾಲಿನ ತುಳಿತ, ಬೆವರಿನ ಸ್ನಾನ ಎಲ್ಲವನ್ನೂ ಸಹಿಸಿಕೊಂಡು ಅಡವೆಪ್ಪನವರು ಸುತ್ತಲೂ ಗಮನಿಸುತ್ತಿದ್ದರು. ಉಪ್ಪಿನ ಸತ್ಯಾಗ್ರಹ ಮಾಡಿದಾಗಲೂ ಅವರಿಗೆ ಈ ರೀತಿ ಉಸಿರು ಕಟ್ಟಿಸುವ ಪರಿಸ್ಥಿತಿ ಬಂದಿರಲಿಲ್ಲ.

"ನನ್ನ ಪರ್ಸು ಹೋಯ್ತಲಪ್ಪೋ, ಟಿಕೇಟ್ ತೆಗೊಳ್ಳೋಕ್ಕೂ ದುಡ್ಡಿಲ್ಲದ ಹಾಗೆ ಆಯ್ತಲ್ಲಪ್ಪೋ..." ಎಂಬ ರೋಧನ ಬಸ್ಸಿನಲ್ಲಿ ಮೊಳಗಿತು. ಪರ್ಸನ್ನು ಯಾರು ಕದ್ದರು ಎಂದು ಎಲ್ಲರೂ, ಎಲ್ಲರನ್ನೂ ನೋಡುವವರೆ ಆದರು. ಮಫ್ತಿಯಲ್ಲಿದ್ದ ಮಂತ್ರಿವರ್ಯರ ಮಂಕು ಮುಖವನ್ನು ನೋಡಿದ ಧಾಂಡಿಗನೊಬ್ಬ, ಅವರ ಕತ್ತಿನ ಪಟ್ಟಿಯನ್ನು ಹಿಡಿದುಕೊಂಡ. ಅವರ ಕೆನ್ನೆಗೆ ಬಾರಿಸಿ "ಪಿಕ್ ಪಾಕೆಟ್ ಮಾಡ್ತೀಯೇನೋ ರ್‍ಯಾಸ್ಕಲ್" ಎಂದು ದಬಾಯಿಸಿ, ಅಡವೆಪ್ಪನವರ ಜೇಬಿನಲ್ಲಿದ್ದ

ಐವತ್ತು ರೂಪಾಯಿಗಳನ್ನು ಕಿತ್ತುಕೊಂಡ. "ಇವನೇ ಸ್ವಾಮಿ ಮಾಡಿರೋದು, ನೋಡಿ ಹೇಗೆ ರೌಡಿ ಹಾಗೆ ಇದಾನೆ ಕಳ್ಳನನ್ಮಗ" ಎಂದು ಹೇಳಿ ಮತ್ತೊಂದು ಒತ್ತ ಕೊಟ್ಟ. ತೆಪ್ಪಗೆ ಏಟು ತಿನ್ನುವನನ್ನು ಮಂದಿ ಸುಮ್ಮನೆ ಬಿಟ್ಟಾರೆಯೆ. ಆಳಿಗೊಂದು ಏಟು ಹಾಕಿ ಸಚಿವರನ್ನು ಭೂಶಾಯಿಯಾಗಿ ಮಾಡಿ, ಕೈ ವದರಿಕೊಂರು.

"ಪೋಲೀಸಿನವರಿಗೆ ಕೊಡಿ. ಯಾರೂ ಮ್ಯಾನ್‌ಹ್ಯಾಂಡಲ್ ಮಾಡ್ಬೇಡಿ" ಎಂದು ಕರಿಕೋಟಿನ ವ್ಯಕ್ತಿಯೊಬ್ಬರು ಮೂಲೆಯಿಂದ ಕಿರುಲಿದಾಗ "ಸುಮ್ನೆ ಇರಿ ಸಾರ್. ಅವರೇನು ಮಾಡ್ತಾರೆ. ಯಾವ್ದಾರ ಇನ್‌ಫ್ಲುಯನ್ಸ್ ಮಾಡಿ, ಈ ಬದ್ಮಾಷ್, ಬಿಡಿಸಿಕೊಂಡು ಹೋಗ್ತಾನ್ ಅಷ್ಟೆ. ಇಂಥಾ ಖದೀಮರಿಗೆಲ್ಲಾ ನಾವೇ ಪಾಠ ಕಲಿಸ್ಬೇಕೂ ನೋಡಿ" ಎಂದು ಹೇಳಿ, ಮಂದಿ, ಪಾಪಾಸು ಕಳಚಿಕೊಂಡು, ಮುಖ ಮೂತಿ ನೋಡದೆ ಇನ್ನೊಂದು ಒಬ್ಬೆ ಹೊಡದು ಅಡವೆಪ್ಪನವರನ್ನು ಬಸ್ಸಿನಿಂದ ಹೊರಹಾಕಿತು.

ಹಾದಿಯಲ್ಲಿ ಬಿದ್ದ ಸಚಿವರು ಹೇಗೋ ಮನೆ ಸೇರಿಕೊಂಡರು. ವೈದ್ಯರು ಬಂದು ಇಲಾಜು ಮಾಡಿದ ಮೇಲೆ ಪಲ್ಲಂಗದಲ್ಲಿ ಪವಡಿಸಿದರು. ದುಂಡೇಶಿಗೆ ವಿಷಯವನ್ನು ತಿಳಿಸಿ ನರಳುತ್ತಾ ಸಚಿವರು, ಮಗ್ಗಲು ಬದಲಾಯಿಸಿದರು.

"ಮಂತ್ರಿಗಳು ಮಫ್ತಿಯಲ್ಲಿ ಬಸ್ಸಿನಲ್ಲಿ ಪ್ರಯಾಣ ಮಾಡಿ, ಜನರ ಕುಂದು ಕೊರತೆಗಳನ್ನು ಸ್ವತಃ ಪರಿಶೀಲಿಸಿದರು" ಎಂದು ದಪ್ಪ ಅಕ್ಷರಗಳಲ್ಲಿ, ಭಾವಚಿತ್ರ ಸಹಿತ ಪತ್ರಿಕೆಗಳಲ್ಲಿ ಮಾರನೆಯ ದಿನವೇ ಪ್ರಕಟವಾಗಿ, ಅಪಾರ ಪ್ರಚಾರ ಸಿಕ್ಕುವುದೆಂದು ಎಣಿಸಿದ್ದ ದುಂಡೇಶಿಯ ಯೋಜನೆ ತಲೆಕೆಳಗಾಗಿತ್ತು.

---

## ಅತ್ತೆಯ ಸೊಸೆ

ಸೊಸೆಯ ಕಾಟದಿ
ಕನಲಿದ ಅತ್ತೆಯು
ಅಳುವಳು
ಮುಸು ಮುಸು ಮಾಡುತ್ತ,
ಸಿಟ್ಟಲಿ ಸೀಂಟುತ
ಸೊಸೆಯು ಕೇಳುವಳು
ಅತ್ತೆ ಅತ್ತೇ
ಏಕತ್ತೆ?

ಬಸಾ

# ಒಂದು ಜುಬ್ಬಾ ಕತೆ

ಪ್ರಭಾ

ಹೊಸ ಅಲೆ ಚಿತ್ರಗಳು-- ಗೊತ್ತು ತಾನೆ? ಹಾಗೆಂದರೆ ಅದೇನೋ ಇಂದಿಗೂ ನನಗೆ ತಿಳಿಯದು. ಆದರೂ ಈ ಹೊಸ ಅಲೆಗಳ ಚಿತ್ರಗಳ ಹೊಡೆತ ಅದರ ಮೇರು ಘಾರಂನಲ್ಲಿದ್ದಾಗ (ಅಂದರೆ ಪೀಕ್ ಫಾರ್ಮ್) ನಾನು ಸಾಹಿತ್ಯದ ಕಾರ್ಯಕ್ರಮಗಳಿಗೆ ತಪ್ಪದೇ ಹೋಗುತ್ತಿದ್ದೆ. ಅಲ್ಲಿ ನನ್ನ ಥರಹವೇ ಸಭೆಗೆ ಎಂದು ಬಂದ ಜನ ಸಭೆಯ ಮೊದಲೋ ಅಥವಾ ನಂತರವೋ ಗುಂಪು ಸೇರಿಕೊಂಡು ತಲೆ ಮೇಲೆ ಆಕಾಶ ಕಳಚಿ ಬಿದ್ದಹಾಗೆ ಸಂಕೀರ್ಣ, ಕಂಕೀರ್ಣ, ಸಂವಹನ, ಅಪರಿಗ್ರಾಹ ಅನ್ಯದೇಶೀಯ ವಸ್ತುನಿಷ್ಠ ಮೊದಲಾದ ಪದಗಳನ್ನು ಪುಂಖಾನುಪುಂಖವಾಗಿ ಬಳಸುತ್ತಾ ಕೂಗಾಡುತ್ತಿದ್ದುದು ನನಗೆ ಒಂದು ರೀತಿ ವಿಸ್ಮಯ ತರುತ್ತಿತ್ತು. ಅದೇ ರೀತಿ ವಿಸ್ಮಯವನ್ನುಂಟುಮಾಡುತ್ತಿದ್ದ ಮತ್ತೊಂದು ಸಂಗತಿ ಎಂದರೆ ಈ ಗುಂಪಿನ ಜನರ ವೇಷಭೂಷಣಗಳು. ಈ ಜನರ ಮಾತುಗಾರಿಕೆಗಳಿಂದ ಇವರುಗಳು ಸಾಹಿತಿಗಳೇ ಇರಬೇಕು ಎಂದು ಅರ್ಥೈಸಿಕೊಂಡಿದ್ದೆ. ಈ ಸಾಹಿತಿಗಳಲ್ಲಿ ಸುಮಾರು ಜನ ಅಂದರೆ ಹತ್ತಕ್ಕೆ ಒಂಬತ್ತೂವರೆಯಷ್ಟು ಜನರು ದೊಗಳೆ ಜುಬ್ಬ, ಪೈಜಾಮ ಅಥವಾ ಪ್ಯಾಂಟು ಧರಿಸಿದ್ದು, ದಪ್ಪ ಕನ್ನಡಕಗಳು ಅವರ ಮುಖದ ಮೇಲಿರುತ್ತಿದ್ದವು. ಮತ್ತು ತಲೆಗಳನ್ನು ಎಲ್ಲರೂ ಒಂದೇ ರೀತಿ ಕೆದರಿಕೊಂಡಿರುತ್ತಿದ್ದರು. ಜುಬ್ಬದ ಬಲ ಹೆಗಲಿಗೆ ಅನಿವಾರ್ಯವಾಗಿ ಒಂದು ಹೆಗಲಚೀಲ (ಇದಕ್ಕೆ ನಾನು ತಗುಲಿಹಾಕಿಕೊಳ್ಳುವ ಬ್ಯಾಗು ಎಂದು ಕರೆಯುತ್ತೇನೆ) ನೇತುಬೀಳುತ್ತಿದ್ದು, ಅದರೊಳಗೆ ಜಗತ್ತಿನ ರಹಸ್ಯಗಳನ್ನು ಈ ಜನ ತುಂಬಿಕೊಂಡಿರುತ್ತಿದ್ದರು. ಬ್ಯಾಗು ಬಿರುದು ಹೋಗುವಂತೆ ತೋರುತ್ತಿದ್ದು ಒಂದು ರೀತಿಯಲ್ಲಿ ಬಿ.ಟಿ.ಎಸ್. ರೆಡ್‌ಬೋರ್ಡ್ ಬಸ್ಸುಗಳನ್ನು ಈ ಬ್ಯಾಗುಗಳು ನೆನಪಿಗೆ ತರುತ್ತಿದ್ದವು. ಈ ರೀತಿಯ ಸಾಹಿತ್ಯ ಕಾರ್ಯಕ್ರಮಗಳಿಗೆ ಅಟೆಂಡಿಸಿ ಅಟೆಂಡಿಸಿ ನನಗೂ ಒಂದು ವಿಧವಾದ ಬಾವಿಯಲ್ಲಿನ ಕಪ್ಪೆಯ ಅನುಭವ ಬಂದ ನಂತರ ಮೊದಲ ಬಾರಿಗೆ ಒಂದು ಆಸೆ ಹುಟ್ಟಿತ್ತು. ಅದೆಂದರೆ ಈ ಜನರಾಡುವ ಭಾಷೆ (ಸಂಕೀರ್ಣ, ಮೂರ್ತ, ಅಮೂರ್ತ, ಅನಾಥ ಪ್ರಜ್ಞೆ, ಒಳತೋಟ, ಮಗೂನ ವಾಸನೆ ಇತ್ಯಾದಿ) ಕಲಿಯುವುದು ಮತ್ತು ಅವರಂತೆಯೇ ವೇಷಭೂಷಣ ತೊಡುವುದು.

ತುಂಬಾ ಶ್ರಮ ವಹಿಸಿ ಆ ಭಾಷೆ ಕಲಿಯಬಲ್ಲೆ ಎಂಬ ಧೈರ್ಯ ಬಂದರೂ ಕಣ್ಣಿಗೆ ದಪ್ಪನೆ ಕನ್ನಡಕ ಧರಿಸುವ ನನ್ನ ಆಸೆ ಕೈಗೂಡುವಂತಿರಲಿಲ್ಲ. ಕಾರಣ ನನ್ನ ಕಣ್ಣು

ಇನ್ನೂ ಸ್ಪಷ್ಟವಾಗಿ ಕಾಣುತ್ತಿತ್ತು! ಅದೇ ರೀತಿ ಮತ್ತೊಂದು ಕೈಗೂಡಲಾರದ ಆಸೆಯೆಂದರೆ ಈ ಜುಬ್ಬ ಪ್ಯಾಂಟು ತೊಟ್ಟು ಕೈಯಲ್ಲಿ ತುಂಡು ಸಿಗರೇಟು ಹಿಡಿದು ಮಾತು ಆಡುತ್ತಿದ್ದ ಜನರ ಮಧ್ಯೆ ಸೇರುವ ನನ್ನ ಬಯಕೆ! ಈ ಬಯಕೆಗೆ ಒಂದು ಕಾರಣವಿತ್ತೇ ಎಂಬುದು ಈಗ ನನಗೆ ಸಂಶಯ. ಈ ಸಂಶಯಕ್ಕೆ ಕಾರಣ ಅಂದರೆ ಈ ವೇಷಧಾರಿಗಳಲ್ಲಿ ಗಂಡು ಹೆಣ್ಣು ಎಂಬ ಗುರುತೇ ಸಿಗದಿರುತ್ತಿರುವುದು. ಮತ್ತು ಈ ತೊಳಲಾಟದಲ್ಲೇ ಕೆಲವು ದಿನಗಳ ನಂತರ ಈ ವೇಷಧಾರಿಗಳ ಲಿಂಗ ಕಂಡುಹಿಡಿಯಲು ನಾನು ಒಂದು ಮೆಥಡ್ ಕಂಡುಹಿಡಿದೆ.

ಈ ಮೆಥಡ್ ಅಂದರೆ ಮೀಸೆಗಡ್ಡ ಎರಡೂ ಇದ್ದವರು ಗಂಡು ಪ್ರಾಣಿ; ಬರೀ ಮೀಸೆ ಇದ್ದವರು, ಮತ್ತು ಗಡ್ಡರಹಿತರು ಅಥವಾ ಮೀಸೆ ಗಡ್ಡರಹಿತರು ಹೆಣ್ಣು ಪ್ರಾಣಿಗಳು ಇಂದು. ಆ ಕಾಲದಲ್ಲಿ ಈ ನನ್ನ "ಕಂಡು ಹಿಡಿಯುವಿಕೆ" ಸರಿ ಎಂದೇ ಅನಿಸಿತ್ತು. ಅವರ ಗುಂಪುಗಳಲ್ಲಿ ಸೇರಲಾರದ ನನ್ನ ಒಂಟಿತನಕ್ಕೆ ಕಾರಣಗಳನ್ನು ಅನ್ವೇಷಿಸಿದೆ. ಬಹಳ ದಿವಸಗಳ ನಂತರ ಈ ಅನ್ವೇಷಣೆಗೆ ಉತ್ತರವೂ ಸಹ ಸಿಕ್ಕಿತು! ಅದೆಂದರೆ ಈ ಕಾರ್ಯಕ್ರಮಗಳಿಗೆ ನಾನು ಜುಬ್ಬ ತೊಡದೇ ಬುಷ್‌ಶರ್ಟ್ ತೊಟ್ಟು ಹೋಗುತ್ತಿರುವುದು!

ಈ ಗುಂಪಿನಲ್ಲಿ ನನ್ನನ್ನು ಐಕ್ಯಗೊಳಿಸಿಕೊಳ್ಳಲು ಇದ್ದ ದಾರಿ ಎಂದರೆ ಒಂದು ಜುಬ್ಬ ಕೊಳ್ಳುವುದು ಮತ್ತು ಹೊಸಾ ಪದಗಳನ್ನು ಕಲಿಯುವುದು ಎಂದು ಅಂದೇ ನಿರ್ಧರಿಸಿದೆ. ಹೊಸಾ ಪದಗಳು ಸಂಪರ್ಕ ಸರಿದಂತೆ ನಲ್ಲಿಯಲ್ಲಿ ನೀರು ಬಂದಹಾಗೆ ಬರುತ್ತದೆ ಎಂದು ಹೊಳೆಯಿತು. ಅಂದರೆ ಜುಬ್ಬಾ..?

ಒಂದು ಜುಬ್ಬ ಕೊಳ್ಳುವುದು ಎಂದು ಅಂದೇ ನಿರ್ಧರಿಸಿದೆ. ನೇರ ರೆಡಿಮೇಡ್ ಬಟ್ಟೆ ಅಂಗಡಿಗೆ ನಡೆದೆ. 'ಒಂದು ಜುಬ್ಬಾ ಕೊಡಿ..' ಅಂದೆ.

ಅಂಗಡಿಯಾತ ನನ್ನನ್ನು ಅಪಾದ ಮಸ್ತಕ (ಹೀಗಂದರೆ ಕಾಲಿನಿಂದ ತಲೆಯವರೆಗೆ ಎಂದು ಅರ್ಥವಂತೆ) ನೋಡಿದ.

'ಮದುವೆ ಜುಬ್ಬವೇ?' ಅಂದ.

ಮದುವೆ ಜುಬ್ಬಾ ಎಂಬ ಪದ ನನಗೆ ಹೊಸದು!

"ಹಾಗಂದರೇನ್ರಿ..?' ಅಂತ ಕೇಳಿದೆ.

'ಮದುವೆ ಜುಬ್ಬ ಅಂದರೆ ಮದುವೆಗಳಿಗೆ ಹಾಕಿಕೊಳ್ಳುವ ಜುಬ್ಬ ಸಾರ್. ಮೈಸೂರು ಸಿಟಿನಲ್ಲಿ ಅದನ್ನ ಹೊಲಸಿರ್ತೀವಿ. ಕೆಲವರು ಅದನ್ನ ಕೊಂಡುಕೊಳ್ತಾರೆ.

ಮತ್ತೆ ಕೆಲವರು ಮದುವೆ ದಿನ ಹಾಕಿಕೊಳ್ಳಲು ಅಷ್ಟು ದುಡ್ಡು ಯಾಕೆ ಸುರೀಬೇಕು ಅಂತ ಬಾಡಿಗೆಗೆ ತಗೋತಾರೆ....' ಅಂದ.

'ನನಗೆ ಬೇಕಾಗಿರೋದು ಮದುವೆ ಜುಬ್ಬಾ ಅಲ್ಲ; ಹೀಗೇ ಕ್ಯಾಷುಯಲ್ಲು..' ಅಂದೆ.

ಅಂಗಡಿಯಾತ ನಕ್ಕ.

'ಕ್ಯಾಷುಯಲ್ ಜುಬ್ಬ ಅಂತ ಬರೋಲ್ಲ ಸಾರ್. ಮದುವೆ ಜುಬ್ಬ, ಅಂತ ಇರೋದು. ಅದು ಬಿಟ್ಟರೆ ಭಾಷಣದ ಜುಬ್ಬ ಅಂತ ಇದೆ. ಇದು ಭಾಷಣ ಮಾಡಬೇಕಾದರೆ ತೊಡೋದು. ಅದೂ ನಮ್ಮ ಪೊಲಿಟಿಕಲ್ ಫಿಗರ್ಸ್‌ಗೆ ಸರಿ. ಇನ್ನು ಎಂ.ಜಿ.ರೋಡ್ ಜುಬ್ಬ ಅಂತ ಇದೆ. ಅದು ಎಂ.ಜಿ. ರೋಡ್‌ನಲ್ಲಿ ನಡೀಬೇಕಾದರೆ ಹಾಕೋ ಜುಬ್ಬ – ಕಲರ್ ಕಲರ್ ಇರುತ್ತೆ. ಅದಕ್ಕೆ ಆವಾರ ಜುಬ್ಬ ಅಂತಲೂ ಹೇಳ್ತಾರೆ. ವೈಡ್ ಸೆಲೆಕ್ಷನ್ನು ಇದೆ. ಅಂದಹಾಗೆ ಡೋಂಟ್ ಮಿಸ್ಟೇಕ್ ಮಿ ಸಾರ್ – ನಿಮಗೆ ಮದುವೆ ಆಗಿದೆಯೇ? ಅಂದ.

ಈ ಪ್ರಶ್ನೆ ನನ್ನನ್ನ ಯಾತಕ್ಕೆ ಕೇಳ್ತಿದಾನೆ ಅಂತ ಗಾಬರಿ ಗಾಬರಿ ಇಂದ 'ಇಲ್ಲ' ಅಂತ ತಡವರಿಸಿದೆ.

'ಹಾಗಿದ್ರೆ ಬಿಡಿ. ಯೂನಿಸೆಕ್ಸ್ ಜುಬ್ಬ ಅಂತ ಇದೆ. ಗಂಡ ಹೆಂಡತಿ ಯಾರು ಬೇಕಾದರೆ ಅದನ್ನ ಐದರ್ ಸಿಂಗಲ್ ಆನಿ ನಾರ್ ಡಬಲ್ ಆಗಿ ತೊಡಬಹುದು' ಅಂದ. ಈಗ ಹೊಸದಾಗಿ ಗ್ರಾಮರ್ ಕಲಿತಿದಾನೆ. ಐದರ್ ನಾರ್ ಪ್ರಮೇಹ ನನ್ನ ಮೇಲೆ ಆಗಿದೆ ಅಂತ ಅನಿಸಿದರೂ ಅದನ್ನ ತಲೆಗೆ ಹಚ್ಚಿಕೊಳ್ಳದೇ ನನ್ನ ಚಿಂತೆ ಮುಂದುವರೆಸಿದೆ. ಯಾವ ಜುಬ್ಬ ಕೊಳ್ಳುವುದು ಎಂದು ತಲೆನೋವು ಆರಂಭವಾಯಿತು. ಅಂಗಡಿಯಾತನಿಗೆ ನನ್ನ ಸಮಸ್ಯೆ ಅರಿವಾಗಿರಬಹುದು. ನನ್ನ ಸಹಾಯಕ್ಕೆ ಅವನೇ ಮುಂದಾದ.

'ಫಂಕ್ಷನ್ ಯಾವುದು ಅಂತ ಹೇಳಿ ಸಾರ್..' ಅಂತ ಕೇಳಿದ.

ನಾಚುತ್ತಾ ನಾಚುತ್ತಾ ಒಂದೆರಡು ಸಲ ಉಗುಳು ನುಂಗಿದೆ.

'ಅದು ಹೆಹ್ಹೆ.. ಹೀಗೆ.. ಹೆಹ್ಹೆ.. ಅದು ಹೆಹ್ಹೆ. ಹೆಹ್ಹೆ ಸಾಹಿತ್ಯದ ಕಾರ್ಯಕ್ರಮ ಹೆಹ್ಹೆ..' ಅಂತ ಹೇಳಿ ಬೆವರು ಒರಸಿಕೊಂಡೆ. ಮತ್ತೊಂದು ಸಲ ಹೆಹ್ಹೆ ಮಾಡಿದೆ.

ಆತ ಜೋರಾಗಿ ನಕ್ಕ. 'ಓ ಹಾಗೋ? ಸರಿ ಸಾರ್. ಹಾಗೆ ಹೇಳಿ. ಸಾಹಿತ್ಯದ ಕಾರ್ಯಕ್ರಮದಲ್ಲಿ ಭಾಷಣ ಮಾಡುವ ಗುಂಪೋ ನಿಮ್ಮದು ಅಥವಾ ಕೇಳುಗರ

ಗುಂಪ್ಪೋ ಅಂದರೆ ಪವಡಿಸು ಪರಮಾತ್ಮನೇ ಗುಂಪ್ಪೋ? ಸಾಹಿತ್ಯದ ಕಾರ್ಯಕ್ರಮ ಅಂದರೆ ನಿದ್ದೆ ಮಾಡೋಕೇಂತಲೇ ಕೆಲವು ಜನ ಹೋಗ್ತಾರೆ......' ಅಂತ ಮತ್ತೆ ನಕ್ಕ.

'ಒಂದು ರೀತೀಲಿ ಎರಡನೇ ಗುಂಪು ಅಂದರೆ ಪವಡಿಸೋ ಗುಂಪೇ. ಭಾಷಣ ಮಾಡೋರಿಗೆ ಅಂತಲೇ ಬೇರೆ ತರಹದ ಜುಬ್ಬಾ ಇದೆಯೇ?...' ಅಂತ ಆಶ್ಚರ್ಯದಿಂದ ಕೇಳಿದೆ. ನನ್ನ ಅಜ್ಞಾನಕ್ಕೆ ಅಂಗಡಿಯವನು ಈಗ ಮನಸಾರೆ–ವಿಮರ್ಶಕರು ಹೇಳುವ ಹಾಗೆ– ಮೈಥಿಳಿ ಬಿಟ್ಟು ನಕ್ಕ.

'ಹೌದು ಸಾರ್, ಭಾಷಣ ಬಿಗಿಯೋರಾದರೆ ಟೀವಿ ತಂಡಕ್ಕೆ, ಟೀವಿ ಕ್ಯಾಮೆರಾಕ್ಕೆ ಸೂಟ್ ಆಗುವಂತಹ ರೀತಿ ಕಲರ್ ಜುಬ್ಬಾ ತೊಡಬೇಕು. ಆದರೆ ಆಡಿಯನ್ಸ್ ಆದರೆ ಅಂದ ಮಾದರಿ ತೊಂದರೆ ಬೇಡ...' ಅಂದ.

ಹಾಗಿದ್ದರೆ ನನಗೆ 'ಆಡಿಯನ್ಸ್ ಜುಬ್ಬಾ ಕೊಡಿ..' ಅಂದೆ. 'ಬನ್ನಿಸಾರ್' ಅಂತ ಅಂಗಡಿಯ ಆ ಮೂಲೆಗೆ ಕರೆದೊಯ್ದ. ನನ್ನೆದುರು ಜುಬ್ಬದ ಸಮುದ್ರವೇ ಬಿಚ್ಚಿಕೊಂಡಿತು. ಪಟ್ಟೆ ಪಟ್ಟೆ ನಿಕ್ಕರಿನ ಬಟ್ಟೆಯಲ್ಲಿ ಹೊಲೆದ ಜುಬ್ಬಗಳಿಂದ ಹಿಡಿದು ರೈಲ್ವೆ ಪೋರ್ಟರ್ ಹಾಕಿಕೊಳ್ಳುವ ನೀಲಿ ಬಣ್ಣದ ಬಟ್ಟೆಯಿಂದ ತಯಾರಿಸಿದ ಜುಬ್ಬಗಳ ರಾಶಿ ಎದುರು ನಿಂತಿತು.

ಪಟ್ಟೆ ಪಟ್ಟೆ ಜುಬ್ಬಾ ಬೇಡ ಅಂತ ನಾನೇ ನಿರ್ಧರಿಸಿದೆ. ಒಂದು ಗಂಟೆ ಜುಬ್ಬಾಗಳನ್ನ ಕೆದಕೀ ಕೆದಕೀ ಕೊನೆಗೆ ಒಂದು ರಕ್ತ ಕೆಂಪಿನ ಬಣ್ಣದ ಜುಬ್ಬಾ ಆರಿಸಿದೆ. ರಕ್ತ ಕೆಂಪು ನನಗೆ ಯಾತಕ್ಕೆ ಮೆಚ್ಚೋ ನನಗೆ ತಿಳಿಯದು.

"ಹೋ ತುಂಬಾ ಚೆನ್ನಾಗಿದೆ ಸಾರ್. ನಿಮಗೆ ನಾನೇ ಇದನ್ನ ತಗೊಳ್ಳಿ ಅಂತ ಸಜೆಸ್ಟ್ ಮಾಡಬೇಕೂಂತಿದ್ದೆ. ನಿಮಗೆ ಈ ಕಲರ್ ಇಷ್ಟ ಆಗುತ್ತೋ ಇಲ್ಲವೋ ಅಂತ ಡೌಟ್ ಇತ್ತು. ನಿಮ್ಮ ಕಲರ್‌ಗೆ ಈ ಜುಬ್ಬಾ ಫೈನ್ ಮ್ಯಾಚೂ.." ಅಂತ ಹೇಳಿ ಜುಬ್ಬಾ ಪ್ಯಾಕಿಸಿದ. ಆತ ಕೇಳಿದಷ್ಟು ಹಣ ತೆತ್ತು ಅದನ್ನ ಮನೆಗೆ ತಂದೆ.

ಮಾರನೇ ದಿವಸ ಸಾಹಿತ್ಯದ ಕಾರ್ಯಕ್ರಮಕ್ಕೆ ಹೋಗುವ ಮುನ್ನ ರೂಂ ಬಾಗಿಲು ಹಾಕಿ ಜುಬ್ಬ ತೊಟ್ಟು ಕನ್ನಡಿ ಮುಂದೆ ನಿಂತೆ. ಹಾಗೆ ಹೀಗೆ ಎರಡು ಸಲ ನಡೆದಾಡಿದೆ. ಆದೇಕೋ ನನ್ನ ಮೈ ಥರಥರಗುಟ್ಟಿತು. ಈ ಜುಬ್ಬಾ ಹಾಕಿ ರಸ್ತೆಯಲ್ಲಿ ನಡೆದರೆ ಜನ ಶಿಳ್ಳೆ ಹೊಡೀತಾರೆ ಅನಿಸಿ ಜುಬ್ಬ ಮಡಿಸಿಟ್ಟೆ. ಮಾಮೂಲು ಬುಷ್ ಷರಟು ತೆಗೆದು ಹಾಕಿಕೊಂಡು ಆಚೆ ಹೋದೆ.

ಪ್ರತಿ ಸಾಹಿತ್ಯದ ಕಾರ್ಯಕ್ರಮಕ್ಕೂ ಈ ಜುಬ್ಬ ತೆಗೆಯೋದು, ಹೆದರಿ ಒಳಗಿಡೋದು ಹೀಗೇ ನಡೆದು ಇಂತಹ ದ್ವಂದ್ವದಲ್ಲೇ (ಈ ದ್ವಂದ್ವ ಅಂಬೋ ಪದ ಸಹ ಸಾಹಿತ್ಯದ ಕಾರ್ಯಕ್ರಮದಲ್ಲೇ ನಾನು ಕೇಳಿ ಕಲಿತಿದ್ದು!) ನನ್ನ ಮದುವೆ ಕೂಡ ನಡೆಯಿತು. ಹೆಂಡತಿ ಸಂಗಡ ಹನಿಮೂನ್‌ಗೆ ಅಂತ ಬಂಡಿಪುರ ಪ್ರೋಗ್ರಾಂ ಹಾಕಿದೆ. ತುಂಬ ಜೋಪಾನದಿಂದ ಈ ಜುಬ್ಬಾ ತೆಗೆದುಕೊಂಡು ಹೋದೆ. ಬೆಳಿಗ್ಗೆ ವಾಕಿಂಗ್ ಹೊರಡಬೇಕಾದರೆ ಈ ಜುಬ್ಬಾ ತೆಗೆದು ಹಾಕಿಕೊಂಡೆ. ರೂಮಿಗೆ ಬಂದ ಹೆಂಡತಿ ನನ್ನನ್ನು ನೋಡಿ ಕಿಠಾರ್ ಅಂತ ಅರಚಿ ಬಿದ್ದೇಬಿಟ್ಟಳು! ಅವಳು ಕೂಗಿದ್ದು ಕೇಳಿ ಫಾರೆಸ್ಟ್ ಆಫೀಸರು ಓಡಿ ಓಡಿ ಬಂದರು. "ಡಾರ್ಮಿಟರಿಗೆ ಹುಲಿಬಂದುಬಿಟ್ಟವೋ ಅಂತ ಗಾಬರಿ ಆಯಿತು ಸಾರ್ – ಅದಕ್ಕೇ ಬಂದೆ' ಅಂತ ವಿವರಣೆ ನೀಡಿದವರು 'ಸಾರ್ ಈ ಜುಬ್ಬಾ ಕಾಡಿಗೆ ಮಾಡಿಸಿದ್ದಲ್ಲ. ದಯವಿಟ್ಟು ಬಂಡೀಪುರ ಬಿಡುವವರೆಗೂ ನೀವು ಈ ಜುಬ್ಬ ಧರಿಸಬೇಡಿ..' ಅಂತ ರಿಕ್ವೆಸ್ಟಿಸಿಕೊಂಡರು. ಹೆಂಡತಿ ಈ ವೇಳೆಗೆ ಪ್ರಜ್ಞೆ ತಂದುಕೊಂಡಿದ್ದಳು. 'ನಿಮ್ಮನ್ನ ಯಾರೋ ಶೂಟ್ ಮಾಡಿದಾರೆ ಅದಕ್ಕೇ ನಿಮ್ಮ ಬಟ್ಟೆ ಎಲ್ಲಾ ರಕ್ತ ಆಗಿದೆ ಅಂತ ಅನಿಸಿತೂರಿ..' ಅಂತ ತಾನು ಕಿರುಚಿ ಪ್ರಜ್ಞೆ ತಪ್ಪಿದ್ದಕ್ಕೆ ವಿವರಣೆ ನೀಡಿದಳು. ಜುಬ್ಬಾ ಮತ್ತೆ ಪೆಟ್ಟಿಗೆ ಸೇರಿತು. ಮದುವೆ ಮುಗಿದು ಅದೆಷ್ಟೋ ವರುಷ ಆದರೂ ಮತ್ತೆ ಜುಬ್ಬಾ ತೊಡುವ ಅವಕಾಶವೇ ಸಿಗಲಿಲ್ಲ. ಮಕ್ಕಳು ಮರಿ ಆದವು. ಕಳೆದ ತಿಂಗಳು ನನ್ನಾಕೆ ಮನೇಲಿನ ಕಸ ಆಚೆ ಎಸೆಯಲು ಪೆಟ್ಟಿಗೆ ತೆರೆದರೆ ಅವಳಿಗೆ ಈ ಜುಬ್ಬಾ ಕಾಣಿಸಬೇಕೆ? ಹಳೇ ನೆನಪು ಅವಳಿಗೂ ನನಗೂ ಮರುಕಳಿಸಿತು.

ಕೆಂಪು ಜುಬ್ಬಾ ಹೊರತೆಗೆದ ಹೆಂಡತಿ 'ರೀ ಒಂದು ಕೆಲಸ ಮಾಡೋಣವೇ?..' ಅಂದಳು. ಹೆಂಡತಿಯರು "ಒಂದು ಕೆಲಸ" ಮಾಡುವಾಗ ಗಂಡಂದಿರ ಅನುಮತಿ ಕೇಳಿದರೆ ಯಾವ ಗಂಡನಿಗೆ ತಾನೇ ಹೆಮ್ಮೆ ಅನಿಸುಲ್ಲ? ನನಗೂ ಹೆಮ್ಮೆ ಆಯಿತು.

'ವಾಟ್ ಡಾರ್ಲಿಂಗ್ ಯಾವ ಕೆಲಸ?' ಅಂತ ಕೇಳಿದೆ.

'ದಿನಾ ಬೆಳಿಗ್ಗೆ ಬುಡುಬುಡಿಕೆ ಅವನು ಬರ್‍ತಾನಲ್ಲಾ?....'

'ಹೂಂ ಅದೇ ಪೊನ್ನು ಚಾಮಿಯೇ?' ಅಂದೆ. ದಿನಾ ಮನೆಗೆ ಬರೋ ಬುಡು ಬುಡಿಕೆ ಅವನ ಹೆಸರು ಪೊನ್ನು ಚಾಮಿ ಅಂತ ಅವನನ್ನ ಮಾತನಾಡಿಸಿ ತಿಳಿದುಕೊಂಡಿದ್ದೆ.

'ಹೂಂ ಅವನೇರೀ. ನಿಮ್ಮದು ಯಾವುದಾದರೂ ಹಳೇ ಷರಟು ತನ್ನಿ ಅವ್ವಾ, ಪ್ಯಾಂಟು ತನ್ನಿ ಅವ್ವಾ ಅಂತ ಕೇಳಿದಾನೆ' ಅಂದಳು. ತಲೆ ಆಡಿಸಿದೆ 'ಒಂದು ಕೆಲಸ ಮಾಡು. ಫ್ಯಾಕ್ಟರಿ ಹಳೇ ಯೂನಿಫಾರ್ಮು ಕೊಟ್ಟುಬಿಡು..' ಅಂದೆ.

'ಫ್ಯಾಕ್ಟರಿ ಯೂನಿಫಾರಂನ್ನೇ ಕೊಡ್ತೀನೀಂತ ಹೇಳಿದೇರಿ. ಬೇಡ್ರಪ್ಪಾ ಈ ರಸ್ತೇಲಿರೋರೆಲ್ಲಾ ಅದನ್ನೇ ಕೊಟ್ಟಿದ್ದಾರೆ. ನನ್ನ ಹೆಂಗಸ್ರು ಅದನ್ನ ಒಗೀಬೇಕಾದರೆಲ್ಲಾ ಬೈತಾಳೆ – ತುಂಬಾ ಭಾರವಂತೆ. ಬೇರೆ ಏನಾರ ಕೊಡಿ.. ಅಂದಾರೀ. ಪಾಪ ಕೇಳ್ಕೋತಿದ್ದಾನ್ರೀ...' ಅಂತ ಅಂದಳು.

'ಹೂಂ ಅದಕ್ಕೇ..' ಅಂತ ಮುಖ ಕೆಟ್ಟದು ಮಾಡಿದೆ.

'ಈ ಜುಬ್ಬಾ ಅವನಿಗೇ ಕೊಟ್ಬು ಬಿಡೋಣಾರೀ..' ಅಂತ ಸಲಹೆ ನೀಡಿದಳು. ಹೆಂಗಸರು ಅದರಲ್ಲೂ ಧರ್ಮಪತ್ನಿ ತೀರ್ಮಾನ ತೆಗೆದುಕೊಂಡ ನಂತರ ಅದನ್ನ 'ವೀಟೋ' ಮಾಡುವ ಧೈರ್ಯ ಯಾವ ಗಂಡು ಪ್ರಾಣಿಗೆ ಇದೆ ತೋರಿಸಿ? 'ಸರಿ ಏನಾದರೂ ಮಾಡಿಕೋ..' ಅಂತ ಒಪ್ಪಿಗೆ ಸೂಚಿಸಿದೆ.

ಈ ನೆನಪು ಯಾಕೆ ಬಂತು ಅಂದರೆ...

ಮೊನ್ನೆ ಒಂದು ಸಾಹಿತ್ಯದ ಕಾರ್ಯಕ್ರಮಕ್ಕೆ ಹೋಗಿದ್ದೆ– ಹೆಂಡತಿ ಮನೆಯಲ್ಲಿ ಇರಲಿಲ್ಲ ಎಂಬ ಒಂದೇ ಕಾರಣಕ್ಕಾಗಿ. ತಲೆ ಕೆಡಿಸಲು ಮನೆಯಾಕೆ ಇಲ್ಲವಾದಲ್ಲಿ ತಲೆ ಎಲ್ಲಿ ಕೆಡುತ್ತದೋ ಅಲ್ಲಿಗೇ ಸಡೆಯತಕ್ಕದ್ದು ಎಂದು ವುಡ್‌ಹೌಸ್ ಹೇಳಿದ್ದಾನಂತೆ. ಹಳೇ ವಾಸನೆ, ಹಳೇ ಚಟ ಮತ್ತು ಹಳೇ ಸ್ನೇಹಿತರ ನೆನಪುಗಳು ಮತ್ತು ಇಂತಹ ಅಸಾಮಾಜಿಕ ಪ್ರಾಣಿಗಳ ಬೇಟಿ ನಡೆಯಬೇಕಾದರೆ ಹೆಂಡತಿ ಮನೆಯಲ್ಲಿ ಇರಬಾರದು ಎಂದೂ ಸಹ ಅದೇ ವುಡ್‌ಹೌಸ್ ಅಭಿಮತ. ಸಾಹಿತ್ಯದ ಕಾರ್ಯಕ್ರಮದಲ್ಲಿ ವಿಐಪಿ ಭಾಷಣ ಕೊರೆದ. ಸಾಹಿತಿಯ ಜುಬ್ಬವೂ, ನಾನು ಅಲ್ಲ ಸಾರಿ ನನ್ನಾಕೆ ಬುಡುಬುಡುಕೆಯವನಿಗೆ ನೀಡಿದ ಜುಬ್ಬವೂ ಒಂದೇ ಬಣ್ಣದ್ದು! ಕಾರ್ಯಕ್ರಮ ಮುಗಿಯುವವರೆಗೂ ಆಕಳಿಸುತ್ತಾ ಇದ್ದು ಕಾರ್ಯಕ್ರಮ ಮುಗಿದ ನಂತರ ಭಾಷಣಕಾರರ ಬಳಿಗೆ ನಡೆದೆ. 'ಭಾಷಣ ಚೆನ್ನಾಗಿತ್ತು ಸಾರ್..' ಅಂತ ಉಬ್ಬಿಸಿದೆ. ಉಬ್ಬು ಇಳಿಯುವ ಮುನ್ನಾ ಮತ್ತೊಂದೆರಡು 'ಕಿಕ್' ಕೊಡುವ ಹೊಗಳಿಕೆ ಸೇರಿಸಿದೆ. ಈ 'ಕಿಕ್'ಗಳಿಂದ ಆತ ಕಾಮನಬಿಲ್ಲಿಗೆ ನೇತಾಡುತ್ತಿದ್ದಾನೆ ಎಂಬ ನಂಬಿಕೆ ಬಂದ ನಂತರ 'ಜುಬ್ಬಾ ಸಾರ್, ತಾವು ತೊಟ್ಟಿರುವ ಜುಬ್ಬಾ ತುಂಬಾ ಚೆನ್ನಾಗಿದೆ ಸಾರ್ ಎಲ್ಲಿ ಸಿಗುತ್ತೆ?..' ಅಂತ ಕೇಳಿದೆ.

ಹಿರೇ ಸಾಹಿತಿಗಳು ಬಾಯಿ ತುಂಬಾ ನಕ್ಕರು. "ಇದಾರೀ? ನಮ್ಮ ಮನೇಗೆ ಪೊನ್ನಾಮಿ ಅಂತ ಒಬ್ಬ ಬುಡುಬುಡಿಕೆ ಆಸಾಮಿ ಬರ್ತಾನ್ರೀ. ಅವನ ಮಗ ಕೊಲ್ಲಾಪುರದಲ್ಲಿದ್ದಾನಂತೆ. ಅವನ ಮಗನೇ ಇದನ್ನ ಊರಿಂದ ಅಪ್ಪಂಗೆ ಕಳಿಸಿದನಂತೆ. ಈ ಬಣ್ಣದ ಜುಬ್ಬಾ ತೊಟ್ಟು ರಸ್ತೇಲಿ ನಡೆದರೆ ನಾಯಿ ಹಿಂಡೇ ಅಟ್ಟಿಸಿಕೊಂಡು ಬರುತ್ತೆ ಸಾರ್. ನೀವು ತಗೊಳ್ಳಿ ಭಾಸಣ ಗೀಸಣ ಮಾಡ್‌ಬೇಕಾದರೆ

ಹಾಕ್ಕೊಳ್ಳಿ ಭೇಸಾಗ್ಬೈತೆ' ಅಂತ ನನಗೆ ಇದನ್ನ ತೋರಿಸಿದಾ ರಿ। ಹೊಸಾ ಜುಬ್ಬಾ. ಒಳ್ಳೇ ಕಾಂಟ್ರಾಸ್ಟ್ ಕಲರ್. ನಮ್ಮ ಟೀವೀಗೆ ಹೇಳಿ ಮಾಡಿಸಿದ ಹಾಗಿದೆ. ಅವನ ಹತ್ತಿರ ಚೌಕಾಸಿ ಮಾಡಿ ಕೊಂಡುಕೊಂಡೇರೀ. ಜುಬ್ಬಾ ಚೆನ್ನಾಗಿದೆಯಾ? ಈಗಾಗಲೇ ಎಂಟು ಜನ ಸಾಹಿತಿಗಳು ಇಂತಹ ಜುಬ್ಬಾ ತರಿಸಿಕೊಡಿ ಅಂತ ಕೇಳಿದ್ದಾರೆ. ಪೊನ್ನಾಮಿ ಹೇಳಿ ಅವನ ಮಗಂಗೆ ಕಾಗದ ಬರೆಸಬೇಕು.... ಅಂತ ಹೇಳುತ್ತಾ ಮತ್ಯಾರಿಗೋ ಜುಬ್ಬಾದ ವಿವರಣೆ ನೀಡಲು ಆರಂಭಿಸಿದರು!

ಮೈಗೆ ತೊಡುವ ಬಟ್ಟೆ, ಹೊಟ್ಟೆಗೆ ಹೋಗುವ ಹಿಟ್ಟು, ಕೈಗೆ ಸಿಗುವ ಹೆಂಡತಿ ಇವೆಲ್ಲವೂ ಒಂದು ರೀತಿ ಋಣಾನುಬಂಧವಂತೆ. ಬಹುಶಃ ಜುಬ್ಬಾಗಳೂ ಸಹ ಇವೇ ಗುಂಪಿಗೆ ಸೇರುತ್ತವೆಯೇ? ಖಂಡಿತ ನನಗೆ ತಿಳಿಯದು!

---



"ಅಕ್ರಮ ಕಟ್ಟಡಾನೆಲ್ಲಾ ನಾನೇ ನೋಡ್ಕೊಳ್ಳೋದು!"

# "ಥೂ"ಕಾರ

**ಎಂ.ಎನ್.ಕೆ.**

ನಮ್ಮ ಭಾಷೆಯಲ್ಲಿ ನಾನಾ "ಕಾರ"ಗಳಿವೆ. ಜಯಕಾರ, ಝೇಂಕಾರ, ಹೂಂಕಾರ, ಅಹಂಕಾರ, ಮಮಕಾರ, ಚೀತ್ಕಾರ, ಸತ್ಕಾರ, ಪೂತ್ಕಾರ ಇತ್ಯಾದಿ, ಇತ್ಯಾದಿ. ಈ "ಕಾರ" ಕೋಶಕ್ಕೆ "ಥೂತ್" ಕಾರ ಅಥವಾ ಸಿಂಪಲ್ ಆಗಿ "ಥೂ"ಕಾರವನ್ನೂ ಸೇರಿಸಬಹುದು.

ಯಾವುದೂರೀ ಈ ಥೂ ಕಾರ ಎಂದು ಕೇಳಿದಿರಾ? ಅದೇ ನಾವು ನಮ್ಮ ಸಮಾಜದಲ್ಲಿ ದಿನನಿತ್ಯ ನಡೆಯುವ, ಅವ್ಯಾಹತವಾಗಿ ನಡೆಯುತ್ತಿರುವ ಕಟ್ಟಳೆ. ನಾವು ದಿನನಿತ್ಯ ಅನುಭವಿಸುವ ಅವಾಂತರ. ಕೆಲವರು ಇದು ನಮ್ಮ ಭಾರತದ ವೈಶಿಷ್ಟ್ಯವೆನ್ನುತ್ತಾರೆ. ಇನ್ನು ಕೆಲವರು ಇದು ನಮ್ಮ ಸಮಾಜದ ಪಿಡುಗು ಎಂದು ಸಿನಿಸುತ್ತಾರೆ. ಇರಲಿ. ಈ ಥೂಕಾರದ ನಾನಾ ಬಗೆಗಳನ್ನು ಪರಿಶೀಲಿಸೋಣ.

ಇದು ಸಾರ್ವಜನಿಕರ ರಸ್ತೆಗಳಲ್ಲಿ, ಬಸ್ ರೈಲು ನಿಲ್ದಾಣದಲ್ಲಿ, ಕ್ಯೂಗಳಲ್ಲಿ ಅವ್ಯಾಹತವಾಗಿ ನಡೆಯುತ್ತಿರುತ್ತದೆ. ಇದಕ್ಕೆ ಅಡೆ-ತಡೆ ಒಡ್ಡಲು ಸಾಧ್ಯವೇ ಇಲ್ಲ.




ಬೀಡಿ ಸೇದುವವರಂತೂ ಇದನ್ನು ನಿಮಿಷಕ್ಕೆ 2-3 ಬಾರಿಯಾದರೂ ಆಚರಿಸುತ್ತಾರೆ. ಬೀಡ ಜಗಿಯುವವರು, ಕಡ್ಡಿಪುಡಿ ಸೇವಿಸುವವರು ಪದೇ ಪದೇ ನಾನಾ ವರ್ಣಗಳಲ್ಲಿ ಇದನ್ನು ಹೊರಹಾಕುತ್ತಾರೆ. ನಮ್ಮ ಟಾರ್ ರಸ್ತೆಗಳಲ್ಲಿ ಇದು

ಆಕಾರದ ತಾರೆಗಳಂತೆ ಮಿನುಗುತ್ತಿರುತ್ತದೆ. ನನ್ನ ಸ್ನೇಹಿತರೊಬ್ಬರಿಗೆ ಈ ಥೂಕಾರದ ಉಗುಳು ಬಹು ಮುಜುಗರ. ಅವರು ರಸ್ತೆಯ ಮೇಲೆ ಕಣ್ಣು ತೆಗೆಯುವುದೇ ಇಲ್ಲ. ಈ ಥೂಕಾರದ ಅವಶೇಶವನ್ನು ತುಳಿಯದೆ ಅವರು ರಸ್ತೆಯಲ್ಲಿ ನಡೆಯುವುದು ಮಕ್ಕಳು ಕುಂಟೆ-ಬಿಲ್ಲೆ ಆಡಿದಂತಿರುತ್ತೆ. ಅವರಿಗೆ ವಾಹನ ಭಯಕ್ಕಿಂತ, ರಸ್ತೆ ಥೂಕಾರ ಭಯ ಜಾಸ್ತಿ.

"ಥೂ"ಕಾರಿಗಳು ನಾನಾ ವಿಧಿಗಳನ್ನು ಅನುಸರಿಸುತ್ತಾರೆ. ಕೆಲವರು ಗಟ್ಟಿಯಾಗಿ ಕ್ಯಾಕರಿಸಿ ಥೂಕರಿಸುತ್ತಾರೆ. ಇವರ ವಿಶಿಷ್ಟ ಜಾಗ ಹೋಟೇಲ್‌ಗಳ ವಾಷ್ ಬೇಸಿನ್‌ಗಳು. ಈ ಜನಕ್ಕೆ ತಮ್ಮ ಕ್ಯಾಕರಿಕೆ ಬೇರೆ ತಿಂಡಿ ತಿನ್ನುವ ಜನರಿಗೆ ಬಹು ಆಪ್ಯಾಯಮಾನವೆಂದೇ ಭಾವನೆ ಎಂದು ತೋರುತ್ತದೆ!.

ಎರಡನೇ ಪರಿ ಎಂದರೆ, ಎಲೆ ಅಡಿಕೆ ಜಗಿದು, ತುಟಿಗೆ ಎರಡು ಬೆರಳಿಟ್ಟು ಥೂಕರಿಸುವುದು. ಈ ಜನದ ಅಖಾಡ ಆಫೀಸಿನ ಅಥವಾ ಇತರೆ ಗೋಡೆಗಳು. ಈಗ್ಗೆ ಕೆಲವು ದಿನಗಳ ಹಿಂದೆ ಪ್ರಪಂಚದಲ್ಲೆಲ್ಲೋ ಈ ರೀತಿ ಉಗಿಯುವ ಪಂದ್ಯವಿತ್ತಂತೆ. ಈ ಪಂದ್ಯವನ್ನಾದರೂ ಒಲಂಪಿಕ್ಸ್‌ಗೆ ಲಗತ್ತಿಸಿದರೆ, ನಮಗೆ ಕಂಚಾದರೂ ದಕ್ಕಬಹುದೇ? ಉತ್ತರ ಭಾರತದಲ್ಲಿ ಈ ಪಿಡುಗನ್ನು ತಡೆಗಟ್ಟಲು, ಗೋಡೆಗಳಿಗೆಲ್ಲಾ (ಮನುಷ್ಯನ ಮುಖದೆತ್ತರದಲ್ಲಿ) ದೇವರ ಚಿತ್ರಗಳನ್ನು ಬಿಡಿಸಿದರಂತೆ. ನಾವು ಬಹು ಸಭ್ಯ ಜನ. ದೇವರ ಭಯ-ಭಕ್ತಿ ಬಹುವಾಗಿದೆ. ಅದಕ್ಕೆ ಅವರ ಥೂಕಾರದ ಪಿಚಕ್, ದೇವರ ಚಿತ್ರಗಳಿಗೆ ಸ್ವಲ್ಪವೂ ತಾಗದೆ, ಚಿತ್ರಗಳ ಮಧ್ಯ ಜಾಗದಲ್ಲಿ ಬಿತ್ತಂತೆ!

ಮೂರನೇ ಪರಿಯವರು ಬಹು ಅಪಾಯಕಾರಿಗಳು. ಅವರು ನಿಶ್ಯಬ್ಧವಾಗಿ ತಮ್ಮ ಥೂಕಾರ ನಡೆಸುತ್ತಾರೆ. ಇವರ ಯುದ್ಧಭೂಮಿ, BTS bus ಒಳಗೆ. ಇವರು ಬೇಗ ನುಗ್ಗಿ ಕಿಟಕಿಯ ಸೀಟನ್ನು ಗಿಟ್ಟಿಸುತ್ತಾರೆ. ಹಾಗೇ ಆಗಿಂದಾಗ್ಗೆ ಥೂಕರಿಸುತ್ತಾರೆ. ಈ ಥೂಕಾರದ ವರಪ್ರಸಾದ ಪಾದಚಾರಿಗಳಿಗೆ, ಮತ್ತು ಅಧಿಕವಾಗಿ ಸ್ಕೂಟರ್ ಸವಾರರಿಗೆ ಮೀಸಲು. ಈ ಕಾರಣದಿಂದ ನಮ್ಮ ಘನ ಸರ್ಕಾರದ ಹೆಲ್ಮೆಟ್ ಕಾಯಿದೆ ಈ ಥೂಕಾರಿಗಳಿಗೆ ವಿರುದ್ಧ ಎಂದು ಹೇಳಬಹುದು. ಇವರ ಉಗುಳು ಹೆಲ್ಮೆಟ್ ಮೇಲೆ ಬಿದ್ದು ಅದನ್ನು ತೊಳೆಯಲು ಸಾಧ್ಯ. "ಭುಜ, ಬೆನ್ನಿನ ಮೇಲೆ ಬಿದ್ದರೆ" ಎಂದು ಕೇಳಿದಿರಾ? ಇದನ್ನು ತಡೆಗಟ್ಟಲು ಸರ್ಕಾರ ಪ್ಲಾಸ್ಟಿಕ್ ಕೋಟನ್ನು ಕಡ್ಡಾಯ ಮಾಡಲೂ ಸಾಕು. ಅದು washable ಆಗಿ ISI ಮಾರ್ಕ್ ಹೊಂದಿರಬೇಕು. ಆಗ ನಮ್ಮ ಸಮಾಜ ಕಾರ್ಯಕರ್ತರು "Public Interest Litigation" ಅನ್ವಯ ಕೋರ್ಟಿಗೆ ರಿಟ್ ಅರ್ಜಿ ಸಲ್ಲಿಸಬಹುದು. "ಸನ್ಮಾನ್ಯ..... ಮಂತ್ರಿಗಳ ಭಾವಮೈದುನನ ಷಡ್ಡಕನ ತಮ್ಮನ ಪ್ಲಾಸ್ಟಿಕ್ ಅಂಗಡಿಗೆ

ಸಹಾಯ ಮಾಡಲು ಈ ಕಾನೂನು ತಂದಿದೆ" ಎಂದು ಅವರು ವಾದಿಸಬಹುದು. ಹಾಗೂ ನಮ್ಮ ಮೂರನೇ ವರ್ಗದ "ಥೂಕಾರಿ"ಗಳು "ಇದು ನಮ್ಮ ಮೂಲಭೂತ ಹಕ್ಕಿಗೆ ಧಕ್ಕೆ ತಂದಿದೆ. ಭಾರತದ ಭವ್ಯ ಪರಂಪರೆಯಲ್ಲಿ ಯಾವಾಗಲೂ ಈ ರೀತಿ ಥೂಕಾರಕ್ಕೆ ಎಂದೂ ಅಡ್ಡಿ ತಂದಿರಲಿಲ್ಲ. ಬಸ್ಸಿಗೆ ಹಣತೆತ್ತು ಕೂತು ಥೂಕರಿಸಿ, ಉಗುಳಿಸಿಕೊಂಡ ಪ್ರಾಣಿಯ ಹಿಂಸೆಯನ್ನು ಕಂಡು ಆನಂದಿಸುವುದು ನಮ್ಮ ಆಜನ್ಮ ಹಕ್ಕು. ಇದಕ್ಕೆ ರಾಜ್ಯಾಂಗದ ......... Section...... ಕಲಂನಲ್ಲಿ ಪುರಸ್ಕಾರವಿದೆ. ಆದ್ದರಿಂದ ಘನವೆತ್ತ ನ್ಯಾಯಮೂರ್ತಿಗಳು ಈ ಕಾನೂನನ್ನು ಹೊಡೆದುಹಾಕಿ ನಮ್ಮ ಹಕ್ಕನ್ನು ಉಳಿಸಿಕೊಡತಕ್ಕ"ದ್ದದು ಪ್ರಾರ್ಥಿಸಬಹುದು.ಕಿಕ್ಕಿರಿದ ನ್ಯಾಯಾಲಯದಲ್ಲಿ ಘನವೆತ್ತ ನ್ಯಾಯಮೂರ್ತಿಗಳು ಈ ವಾದವನ್ನು ಆಲಿಸಿ, ಆಲೋಚಿಸಿ, ಚಿಂತಿಸಿ, ಈ ಬಹು ಕ್ಲಿಷ್ಟ ಕಾನೂನಿನ ಸಮಸ್ಯೆಗೆ ಪರಿಹಾರ ಸೂಚಿಸಬಹುದು. ಅವರ ಘನವೆತ್ತ ಆದೇಶವನ್ನು ಇದಿರು ನೋಡುವ.



"ಅದಿಲ್ದಿದ್ರೆ ಯುವ ಜನ ದೇವಾಲಯಕ್ಕೆ ಬರೋದೇ ಇಲ್ಲಾಮ್ಮ!!"

# ರಜಾ ದಿನಗಳು – ಆ ಸುದಿನಗಳು

**ಬಾಗೂರು ಚಂದ್ರು**

ಮುಂದಿನ ವರ್ಷ ಇಂತಿಂತಹ ದಿನಗಳಂದು ರಜಾ ಎಂದು ಸರ್ಕಾರ ನಿರ್ಧರಿಸುವಂತೆ, ಮುಂದಿನ ವರ್ಷ ಇಷ್ಟು ಬಾರಿ, ಇಂತಿಂತಹ ದಿನಗಳಂದು ಸರ್ಕಾರಿ ರಜಾದಿನಗಳನ್ನು ಟೀಕಿಸುವ, ಲೇವಡಿ ಮಾಡುವ ಲೇಖನಗಳನ್ನು ಪ್ರಕಟಿಸಬೇಕೆಂದು ಪತ್ರಿಕಾ ಸಂಪಾದಕರುಗಳು ಕಾರ್ಯಕ್ರಮ ಪಟ್ಟಿ ಸಿದ್ಧಮಾಡಿಟ್ಟುಕೊಂಡಿರುವಂತೆ ಕಾಣುತ್ತದೆ. ಸಂಪಾದಕರಿಗೆ ಪತ್ರ ಬರೆಯುವ ಮೂಲಕ ಸಾಹಿತ್ಯ ಪ್ರವೇಶ ಮಾಡುತ್ತಿರುವವರಿಂದ ಹಿಡಿದು, ವಾರಕ್ಕೆ ಮೂರು ಅಂಕಣ ಬರೆಯುವವರ ವರೆಗೆ ಎಲ್ಲರಿಗೂ ಆ ಸರ್ಕಾರಿ ನೌಕರರ ರಜಾದಿನಗಳಿಂದ ರಾಷ್ಟ್ರಕ್ಕೆ ಎಷ್ಟು ಹಾನಿ ಎನ್ನುವ ವಿಷಯದಲ್ಲಿ ಪರಿತಾಪವೇ. ಅದರಲ್ಲೂ ಜಪಾನ್, ರಷ್ಯಾ ಅಥವ ಟಿಂಬಕ್ಟೂವಿಗೆ ಹೋಗಿ ಬಂದವರಿಗೆ ಈ ವಿಷಯದಲ್ಲಿ ಮಾತನಾಡಲು ನಾಲಿಗೆ ಹರಿತವಾಗುತ್ತದೆ. ಉದ್ದವಾಗುತ್ತದೆ.

ಮೇಜಿನ ಆ ಕಡೆ ಇರುವವರು ಮೌನವಾಗಿ ಇಂತಹ ಟೀಕೆ ಕೇಳಬೇಕು. ಕೆಲವು ಬಾರಿ ಅಪರಾಧ ಪ್ರಜ್ಞೆಯಿಂದ ನರಳಬೇಕು. ಅಂದ ಹಾಗೆ ಇವರಲ್ಲೂ ಕೆಲವರು ಅದರಲ್ಲೂ ಅದೇ ಮೇಜಿನ ಕೆಳಗಡೆ ಕೈಚಳಕ ಮಾಡಲು ಅವಕಾಶವಿರುವವರು ಕೂಡ ಇಂತಹ ರಜಾದಿನಗಳನ್ನು ಟೀಕಿಸುತ್ತಾರೆ – ಬರಡು ದಿನಗಳು ಎಂದು ಶಪಿಸುತ್ತಾರೆ. ಆದರೆ ಮೇಜಿನ ಪಕ್ಕದಲ್ಲಿ ನಿಂತು ಸೀಮೆಸುಣ್ಣವನ್ನು ಉಪಯೋಗಿಸಬೇಕಾದ ನಮ್ಮಂತಹವರಿಗೆ? ಕಲಿಯುತ್ತಿದ್ದಾಗ ಅಷ್ಟೊಂದು ರಜಾ ದಿನಗಳು. ಕಲಿಸಲು ಸಂಬಳ ಬರಲು ಪ್ರಾರಂಭವಾದ ಕೂಡಲೇ ಇವುಗಳೆಲ್ಲಾ ಮಾಟಮಾಯ. ಆ ದುರಂತರ ಗಾಯ. ಅದರ ಮೇಲೆ ರಜಾ ಟೀಕಿಸುವವರ ಬರೆ.

ಅಂದಿನ ಆ ಸುದಿನಗಳು! ಎಷ್ಟು ರಜಾ, ಎಷ್ಟು ಮಜಾ! ಅಂದಹಾಗೆ ನಾನು ಇನ್ನೂ ಹಿರಿಯನಾಗರಿಕನಲ್ಲ. ರೈಲಿನಲ್ಲಿ ಹೋದರೆ ಮುಕ್ಕಾಲುದರ ಮಾತ್ರ ಕೊಡಬೇಕಾದವನಲ್ಲ. ಪಿಂಚಣಿ ಪಡೆಯಲು ಇನ್ನೂ ಸಾಕಷ್ಟು ವರ್ಷಗಳಿವೆ ಎಂದು ಇಲ್ಲಿ ಕಂಸದಲ್ಲಿ ತಿಳಿಸಬೇಕು.

ಐವತ್ತರ ದಶಕದ ಆ ಶಾಲಾದಿನಗಳು ಮೇ 22 ಎಂದರೆ ಎಲ್ಲರಿಗೂ ಗೊತ್ತಿದ್ದ ತಾರೀಖು. ಇಡೀ ರಾಜ್ಯದಲ್ಲಿ ಪ್ರಾಥಮಿಕ ಮಾಧ್ಯಮಿಕ ಶಾಲೆಗಳು ಬೇಸಿಗೆ ರಜದ ನಂತರ ಬಾಗಿಲು ತೆರೆಯುತ್ತಿದ್ದ ದಿನ. ಈಗ ಪಕ್ಕದ ಮನೆ ಹುಡುಗಿ ಹೋಗುತ್ತಿರುವ ಕಾನ್ವೆಂಟ್ ತೆರೆದು ಎಷ್ಟೋ ದಿನಗಳ ನಂತರ ಎದುರು ಮನೆಯ ಬಾಲಕನ ಸೆಂಟ್ರಲ್ ಸ್ಕೂಲಿಗೆ ರಜ ಬರುತ್ತದೆ. ಆದ್ದರಿಂದ ಸರ್ಕಾರಿ ಶಾಲೆಗಳು ಬಾಗಿಲು

ತೆಗೆಯುವ ಮಹತ್ವ ಉಳಿದಿಲ್ಲ. ಅಂದ ಹಾಗೆ ನೀವು ದೊಡ್ಡ ನಗರಗಳಲ್ಲಿದ್ದರೆ ಸರ್ಕಾರಿ ಶಾಲೆ? ಏನು ಹಾಗಂದರೆ? ಎಂದೂ ಕೇಳಬಹುದು. ನಿಮ್ಮ ಮಕ್ಕಳು ಇಂತಹ 'ದೊಡ್ಡಿ'ಗಳಲ್ಲಿ ಓದುತ್ತಿಲ್ಲ ನಿಜ. ಆದರೆ ನೀವು (ನಿಮ್ಮ ವಯಸ್ಸು ಮೂವತ್ತರ ಕೆಳಗಿದ್ದರೆ ನಿಮ್ಮ ತಂದೆ ತಾಯಿಗಳು) ಓದಿದ್ದು ಇಂತಹ ದೊಡ್ಡಿಗಳಲ್ಲೇ ಎನ್ನುವುದನ್ನು ಜ್ಞಾಪಿಸಿಕೊಳ್ಳಿ.

ಅಂದಿನ ಮೇ 22. ಎಲ್ಲರಿಗೂ ಸಂಭ್ರಮ. ಮಕ್ಕಳಿಗೆ ಹೊಸ ಅಂಗಿ, ಹೊಸ ಸ್ಲೇಟ್, ಹೊಸ ಪುಸ್ತಕ ದೊರೆತ ಸಂತೋಷವಾದರೆ ಅಮ್ಮಂದಿರಿಗೆ ಸಧ್ಯ ಒಂದಿಷ್ಟು ಹೊತ್ತಾದರೂ ಇವನ/ಇವಳ ಕಾಟ ತಪ್ಪಿತಲ್ಲ ಎನ್ನುವ ನೆಮ್ಮದಿ. ಇಂದಿನ ಅಮ್ಮಂದಿರಿಗೆ ಈ ನೆಮ್ಮದಿಗಿಂತ ಶಾಲೆ ಪ್ರಾರಂಭವಾಯಿತು ಎಂದರೆ ಷೂ ಪಾಲೀಶ್, ಯೂನಿಫಾರಂ ಇಸ್ತ್ರಿ, ತಿಂಡಿಡಬ್ಬ, ನೀರಿನ ಶೀಷೆ ಮೇಡಂ ಕೊಟ್ಟಿರುವ ಐದು ವಿಷಯಗಳಲ್ಲಿನ ಹದಿನೈದು ಪೇಜ್ ಹೋಂ ವರ್ಕ್ ಶಿಕ್ಷೆ ಜೊತೆ ಜೊತೆಗೆ ಬರುತ್ತದೆ. ನೆಮ್ಮದಿ ಮೈನಸ್ ಆಗಬಹುದು.

ಮೇ ಕೊನೆಯಲ್ಲಿ ಶಾಲಾರಂಭ. ಜೂನ್‌ನಲ್ಲಿ ಮಳೆ, ಹೊಸದಾಗಿ ವರ್ಗವಾಗಿ ಬಂದಿರುವ ಅಧ್ಯಾಪಕರ ಮನೆ ಹುಡುಕುವಿಕೆ. ಬದಲಾದ ಪುಸ್ತಕಗಳು ಇನ್ನೂ ಅಂಗಡಿಗೆ ಬಂದಿಲ್ಲದಿರುವುದು. ಪೂರ್ತಿ ತಿಂಗಳು ಪಾಠವಿಲ್ಲ. ಶಾಲಾ ಮೈದಾನದಲ್ಲಿ ಆಟ. ಮೇಸ್ಟರಿಗೆ ಪೂರ್ಣ ವಿರಾಮ. ಜುಲೈ ಬಂದರೆ ಹಬ್ಬ ಸಾಲು ಜೊತೆಗೆ ರಜಾ ಸಾಲು.

ಅಂದಿನ ದಿನಗಳಲ್ಲಿ ಪ್ರತಿ ಅಮಾವಾಸ್ಯೆ ಶಾಲೆಗೆ ಅರ್ಧದಿನ ರಜ. ಇದರ ಕಾರಣ ನನಗೆ ಗೊತ್ತಿರಲಿಲ್ಲ. ನನ್ನ ಅಕ್ಕ ಅಮಾವಾಸ್ಯೆ ಕತ್ತಲು. ಹಳ್ಳಿಯ ಹುಡುಗರು ಮನೆ ತಲುಪಲು ಕಷ್ಟವಾಗುತ್ತದೆ ಅದರಿಂದ ರಜ ಎಂದು ತಿಳಿಸಿದ್ದಳು. ಅಮಾವಾಸ್ಯೆಯ ಗಾಡಾಂಧಕಾರ ಮಧ್ಯೆ ಮಧ್ಯೆ ಕೇಳುವ ಗೂಬೆ ಕೂಗು ಬಿಟ್ಟರೆ ಉಳಿದಂತೆ ಪೂರ್ಣ ಮೌನ. ಸೋನೆ ಮಳೆ. ಆದರೂ ಬೂಜಗದ ಮರದ ಮೇಲಿನ ಭೇತಾಳನನ್ನು ಹೊತ್ತು ಹೊರಟಿರುವ ರಾಜಾತ್ರಿವಿಕ್ರಮನ ಕತೆ ಕೇಳಿದ್ದ ನನಗೆ ಈ ಕಾರಣ ಸರಿ ಎನ್ನಿಸಿತ್ತು. ನಮ್ಮ ಶಾಲೆಗೆ ಮೂರು ನಾಲ್ಕು ಮೈಲಿ ದೂರದಿಂದ ನಾಗೇನ ಹಳ್ಳಿ, ನೀರುಗುಂದ, ಆನಿವಾಳ ಗ್ರಾಮಗಳ ಹುಡುಗರು ನಡೆದೇ ಬರುತ್ತಿದ್ದರು.

ಆದರೆ ಮುಂದೆ ಯಾವ ದಿನ ರಾಹುಕಾಲ ಯಾವಾಗ ಎಂದು ಎಲ್ಲರೂ ತಿಳಿದಿದ್ದ ಮದರಾಸಿಗೆ ಬಂದ ಮೇಲೆ ಅಮಾವಾಸ್ಯೆಯ ಧಾರ್ಮಿಕ ಮಹತ್ವ ತಿಳಿಯಿತು. ನನ್ನ ಸಹೋದ್ಯೋಗಿ (ವಿಪ್ರನಲ್ಲದವನು) ಪ್ರತಿ ಅಮಾವಾಸ್ಯೆ ಮಧ್ಯಾಹ್ನ

ಮನೆಗೆ ಹೋಗಿ ಬಾಳೆಲೆಯ ಮೇಲೆ ವಡೆ, ಪಾಯಸದ ಊಟ ಮಾಡಿ ಬರುತ್ತಿದ್ದ. ಆದಿನ ಆಫೀಸ್ ಕ್ಯಾಂಟೀನಿಗೆ ಗಿರಾಕಿಗಳೇ ಇರುತ್ತಿರಲಿಲ್ಲ.

ಪ್ರತಿ ಅಮಾವಾಸ್ಯೆ ಅರ್ಧ ದಿನ ರಜವಾದರೆ ಜುಲೈ ತಿಂಗಳ ಆಷಾಡ ಬಹುಳ ಅಮಾವಾಸ್ಯೆ ಪೂರ್ತಿ ರಜ. ಜ್ಯೋತಿ, ಭೀಮ, ಈಶ್ವರ ಇವರುಗಳಿಂದ ನನ್ನ ವಾರ್ಷಿಕ ಆದಾಯದಲ್ಲಿ ಅರ್ಧದಷ್ಟು ಬರುತ್ತಿದ್ದುದು ಅದೇ ದಿನ. ಹೊಸ್ತಿಲ ಮೇಲೆ ಕುಳಿತು ಭಂಡಾರ ಒಡೆದರೆ ಮದುವೆಯಾದ ಅಕ್ಕಂದಿರು ಅದರಲ್ಲಿ ಇಟ್ಟಿರುತ್ತಿದ್ದ ಒಂದು ರೂಪಾಯಿ ನಾಣ್ಯ ನನಗೆ. ಪಾಕೆಟ್‌ಮನಿ ಕೇಳಿ ಗೊತ್ತಿಲ್ಲದ ಕಾಲದಲ್ಲಿ ನನ್ನ ಉಳಿದ ವಾರ್ಷಿಕ ಆದಾಯ, ಊರಿನಿಂದ ಬಂದ ನೆಂಟರು ವಾಪಸ್ ಹೋಗುವಾಗ, (ಅವರ ಹಾಸಿಗೆ ಪೆಟ್ಟಿಗೆಯನ್ನು ಬಸ್ ನಿಲ್ದಾಣದವರೆಗೂ ಹೊತ್ತು ತಂದದ್ದಕ್ಕಾಗಿ?) ಕೊಡುತ್ತಿದ್ದ ಎರಡಾಣೆ. ಪಾವಲಿಗಳ ರೂಪದಲ್ಲಿರುತ್ತಿತ್ತು.

ಕ್ಷಮಿಸಿ ವಿಷಯ ಬಿಟ್ಟು ಎಲ್ಲಿಗೋ ಹೋಗುತ್ತಿದ್ದೇನೆ. ದಿಮಾಸೆಯ ಜೊತೆ ಜೊತೆಗೆ ದಕ್ಷಿಣಾಯನ ಪುಣ್ಯಕಾಲ ಪೂರ್ತಿ ರಜ.(ಭೀಷ್ಮ ಸಾಯಲು ಈ ದಿನವನ್ನು ಕಾಯುತ್ತಿದ್ದ ಎಂದು ತಿಳಿದದ್ದೂ ಎಷ್ಟೋ ವರ್ಷಗಳ ನಂತರ) ವರಲಕ್ಷ್ಮಿ ಹಬ್ಬ ಪೂರ್ತಿ ರಜ. ನಾಗ ಚೌತಿ ಅದರ ಮುಂದಿನ ಪಂಚಮಿ ಒಂದೂವರೆ ದಿನ ರಜ. ಇದರ ಹಿಂದೆ ಉಪಾಕರ್ಮ. ಋಗ್ವೇದಕ್ಕೆ ಒಂದು ದಿನ, ಯಜುರ್ವೇದಕ್ಕೆ ಇನ್ನೊಂದು ದಿನ. ಸಾಮವೇದಿಗಳು ಅನ್ಯಾಯ ಮಾಡಿದ್ದರು. ಇನ್ನೊಂದು ರಜಾ ಕೊಡಿಸುವ ಬದಲು ಬೇರೆ ಕಾರಣಕ್ಕೆ ರಜವಿದ್ದ ದಿನವೇ ಅವರು ಜನಿವಾರ ಬದಲಾಯಿಸಿಕೊಳ್ಳುತ್ತಿದ್ದರಂತೆ. ಆಗ ಎಲ್ಲರೂ ಹೇಳುತ್ತಿದ್ದುದು ಜರ್ಮನರು ಅಥರ್ವಣ ವೇದವನ್ನು ಕದ್ದುಕೊಂಡು ಹೋಗಿದ್ದಾರೆ ಅಂತ. ನಮಗೆ ಇನ್ನೊಂದು ರಜಾ ಕಡಿಮೆ ಮಾಡಿದ ಅವರ ಮೇಲೆ ನಮಗೆ ಸ್ವಾಭಾವಿಕವಾಗಿಯೂ ಕೋಪ.

ಶ್ರಾವಣ ಮಾಸದಲ್ಲಿಯೇ ಗೋಕುಲಾಷ್ಟಮಿ. ನಮಗೆ ರಜವಿದ್ದ ಮಾರನೆಯ ದಿನ ಹೆಡ್ಮಾಸ್ಟರು ನರಸಿಂಹಯ್ಯಂಗಾರರ ಮನೆಯಲ್ಲಿ ಅರುವತ್ತನಾಲ್ಕು ತಿಂಡಿ ಮಾಡುವ ದಿನ. ಅವರಿಗೆ ಸಿ.ಎಲ್. ನಮಗೆ ಅನಧಿಕೃತ ರಜ. ಇದೇ ತಿಂಗಳು ಪ್ರತಿ ಮಂಗಳವಾರ ರವಿಕೆ ಕಣವನ್ನು ಸಮಬಾಹು ತ್ರಿಭುಜದ ಆಕಾರದಲ್ಲಿ ಮಡಿಸಿಟ್ಟು ಪೂಜೆ ಮಾಡುವ ವ್ರತ ಕೆಲವರಿಗೆ. ನಮ್ಮ ಗಣಿತದ ಮೇಸ್ಟರು ಪಾರ್ಟ್‌ಟೈಂ ಪುರೋಹಿತರು. (ಅಥವ ವೈಸ್‌ವರ್ಸಾ) ಅವರು ಐದಾರು ಮನೆಗಳಲ್ಲಿ ಪೂಜೆ ಮಾಡಿಸಿ ಕೊನೆಯ ಮನೆಯಲ್ಲಿ ಹುಗ್ಗಿ (ಇಂದಿನ ಪೊಂಗಲ್) ಪಾಯಿಸ ಊಟ ಮಾಡಿ ಮಧ್ಯಾಹ್ನ ಶಾಲೆಯಲ್ಲಿ ಬೋರ್ಡ್ ಮೇಲೆ ಲೆಕ್ಕ ಬರೆದು ನಿದ್ದೆ ಮಾಡುವರು. ಅವರ ನಿದ್ದೆ ಮುಗಿಯುವವರೆಗೂ ಚಿಕ್ಕ ಪುಟ್ಟ ಆಟ ಆಡಲು ಅವಕಾಶ.

ಮಹಾಲಯ ಅಮಾವಾಸ್ಯೆಯಿಂದ ಹದಿನೈದು ದಿನ ದಸರಾ ರಜ. ಡಿಸಂಬರ್ – ಜನವರಿಯಲ್ಲಿ ಕ್ರಿಸ್‌ಮಸ್ ರಜ ಮತ್ತೆ ಹದಿನಯದು ದಿನ. ಮಧ್ಯೆ ಗೌರಿ ಹಬ್ಬ, ವಿನಾಯಕ ವ್ರತ, ನಾಲೆಯ ಗಣಪತಿ ಬಿಡುವ ದಿನ, ಸಿರಿಯಾಳ ಷಷ್ಠಿ, ರಥಸಪ್ತಮಿ, ಮೊದಲ ಏಕಾದಶಿ, ಉತ್ಥಾನ ದ್ವಾದಶಿ, ಅನಂತ ಚತುರ್ದಶಿ, ಹೋಳಿ ಹುಣ್ಣಿಮೆ, ಕಾರ್ತಿಕ ಅಮಾವಾಸ್ಯೆ ಎಲ್ಲಾ ರಜಾ ದಿನಗಳೇ.

ವೈದಿಕ ಸಂಸ್ಕೃತಿಯದು ಸಿಂಹ ಪಾಲಿತ್ತು ನಿಜ. ಆದರೆ ಉಪ ಸಂಸ್ಕೃತಿಗಳನ್ನು ಮರೆತಿರಲಿಲ್ಲ. ಮಾರಮ್ಮನ ಹಬ್ಬ, ಬೀರೇ ದೇವರ ಪರಿಸೆ, ಅಲ್ಲಾಬಿ ಹಬ್ಬ, ವಿಠಲನ ದಿಂಡಿ, ಕೆಂಪ ತುಳಿಯುವ ದಿನ, ಊರ ಓಕುಳಿ, ಕೆರೆ ತುಂಬಿದಾಗ ತೆಪ್ಪ ಎಷ್ಟೊಂದು ರಜಗಳು.

ಯುಗಾದಿ, ದೀಪಾವಳಿಗಳಿಗೆ ಇನ್ನೂ ರಜವಿದೆ. ರಾಜ್ಯೋತ್ಸವ, ಭಾರತ ಬಿಟ್ಟು ತೊಲಗಿರಿ ಚಳವಳಿಯ 50ನೆಯ , 51ನೆಯ ವಾರ್ಷಿಕೋತ್ಸವಗಳೂ ರಜಾ ದಿನಗಳಾಗಿವೆ. ಮಾಜಿ ಪ್ರಧಾನಿಗಳೊಬ್ಬರು ಕೆಂಪುಕೋಟೆಯಿಂದಲೇ ಒಂದು ರಜಾ ಘೋಷಿಸಿದ್ದಾರೆ. ರಾಜಕೀಯ ಪಕ್ಷಗಳು ಕರೆಯುವ ಬಾಗೂರು ಬಂದ್, ಹೊಸದುರ್ಗ ತಾಲ್ಲೂಕ್– ಚಿತ್ರದುರ್ಗ ಜಿಲ್ಲೆ,– ಕರ್ನಾಟಕ, – ಭಾರತ ಬಂದ್‌ಗಳು ಆಗಿರಲಿಲ್ಲ. ಎಷ್ಟೋ ಜನ ಮಹಾಮಹಿಮರು ಸತ್ತದ್ದಕ್ಕೆ ಶೋಕ ಪಟ್ಟು ಮನೆಯಲ್ಲಿ ಕುಳಿತುಕೊಳ್ಳದೆ ಪಾಣಿಪತ್ ಯುದ್ಧ, ಕಾಲ್ಗೂರ್ಲಿ ಕೂಲ್ಗಾರ್ಲಿ ಚಿನ್ನದ ಗಣಿಗಳ ಬಗೆಗಿನ ಪಾಠ ಕೇಳುತ್ತಿದ್ದೆವು. ಆದರೂ ಪ್ಲಸ್ – ಮೈನಸ್ ಎಲ್ಲಾ ನೋಡಿದರೆ ಇಂದಿನ ರಜಾ ಸಂಖ್ಯೆ ಕಡಿಮೆಯೇ ಆಗಿದೆ. ನಮ್ಮಂತಹವರ ಕುರಿಕಾಯುವ, ಕಂಠಶೋಷಣೆಯ ವೇಳೆ ವೃದ್ಧಿಯಾಗಿದೆ.

ಅಷ್ಟೊಂದು ರಜವಿದ್ದ ಆ ದಿನಗಳ ಮೆಟ್ರಿಕ್‌ಗಳು ಇಂದಿನ ಗ್ರಾಜುಯೇಟ್‌ಗಳಿಗಿಂತ ವಾಸಿ ಎಂದು ಎಲ್ಲರೂ ಹೇಳುತ್ತಾರಲ್ಲವೇ? ರಜಾ ಹೆಚ್ಚಾದರೆ, ನನ್ನಂತಹ ಮೇಸ್ಟರುಗಳ ಪಾಠ ಕಡಿಮೆ ಆದರೆ ಹುಡುಗರಿಗೆ ಒಳ್ಳೆಯದೇ ಆಗಿರಬಹುದಲ್ಲವೇ. ಸರ್ಕಾರಿ ಕಚೇರಿಗಳಲ್ಲಿ ರಜಾ ಇಲ್ಲದ ದಿನ ಚಟುವಟಿಕೆ ಇರುತ್ತದೆ. ರಜಾ ದಿನ ಚಟುವಟಿಕೆ ಇರುವುದಿಲ್ಲ. ಆದರೆ ಎರಡೂ ದಿನ ಕೆಲಸ ನಡೆಯುವುದರಲ್ಲಿ ಅಂತಹ ವ್ಯತ್ಯಾಸವಿದೆಯೆ? ಕಚೇರಿಯ ಕಾಗದ, ಟೆಲಿಫೋನ್, ಜೆರಾಕ್ಸ್ ಮಿಷನ್ ಇವುಗಳ ಬಿಟ್ಟಿ ಬಳಕೆಯಾದರೂ ರಜಾ ದಿನಗಳಂದು ಇರುವುದಿಲ್ಲ. ಆದ್ದರಿಂದ ಸಂಪಾದಕರಲ್ಲಿ ಒಂದು ವಿನಂತಿ. ರಜಾ ದಿನಗಳನ್ನು ಟೀಕಿಸಿ ಪ್ರಕಟಿಸಬೇಕೆಂದು ನಾವು ಹಾಕಿಕೊಂಡಿರುವ ಕಾರ್ಯಕ್ರಮವನ್ನು ದಯವಿಟ್ಟು ಇನ್ನೊಮ್ಮೆ ಪರಿಶೀಲಿಸಿ.

# ಉಂಡ ಮ್ಯಾಲೆ................

ಡಾ. ಬಸವರಾಜ ಸಾದರ

ಎಂ.ಎ. ಅಂತಿಮ ಓದುತ್ತಿದ್ದ ವರ್ಷ. ವರ್ಷಾಂತ್ಯದಲ್ಲಿ ವಿಭಾಗದ ಕನ್ನಡ ಸಂಘದ ವಾರ್ಷಿಕೋತ್ಸವ ಆಚರಿಸುವ ತಜವಿಜಿ ನಡೆಯಿತು. ಬೆನ್ನು ಬಾಗುವಷ್ಟು ತಲೆಪಟ್ಟಿ ವಸೂಲು ಮಾಡಿ, ಏನೇನು ಕಾರ್ಯಕ್ರಮ ನೀಡಬೇಕು, ಯಾವ ನಾಟಕ ಆಡಬೇಕು ಎಂಬುದನ್ನೆಲ್ಲ ವ್ಯವಸ್ಥಿತವಾಗಿ ಯೋಜಿಸಲಾಯ್ತು. ಹಾಡು, ಮಿಮಿಕ್ರೀ, ಫಿಶ್‌ಪಾಂಡ್ ಏರ್ಪಡಿಸುವ ಜವಾಬ್ದಾರಿಯನ್ನು ಒಬ್ಬೊಬ್ಬರ ತಲೆಗೆ ಕಟ್ಟಿದ್ದಾಯ್ತು. 'ಎಮ್ಮೆ್ೀಸೂರ' ಎಂಬ ಗಂಭೀರ ನಾಟಕದ ನಿರ್ದೇಶನವನ್ನು ಕ್ರೋಚೆಗೆ ವಹಿಸಲಾಯ್ತು. (ಕ್ರೋಚೆ ಎಂಬುದು ನಮ್ಮ ಒಬ್ಬ ಸ್ನೇಹಿತನಿಗೆ ನಾವು ಪ್ರೀತಿಯಿಂದ ಇಟ್ಟ ಹೆಸರು. ಈತ ಕನ್ನಡ ಸಂಘದ ಕಾರ್ಯದರ್ಶಿಯೂ ಆಗಿದ್ದ.) ಕ್ರೋಚೆಗೆ ನೆರವಾಗಲು ಹಾಗೂ ಇನ್ನಿತರ ಮಹತ್ವದ ಕೆಲಸಗಳನ್ನು ನಿಭಾಯಿಸಲು ಬುದ್ಧನನ್ನು ನೇಮಿಸಲಾಯ್ತು. (ಬುದ್ಧ ಎಂದ ಕೂಡಲೇ ಆಶ್ಚರ್ಯಪಡಬೇಡಿ. ವಿಭಾಗಕ್ಕೆ ಅತ್ಯಂತ ಜಾಣ ಎನಿಸಿದ ವಿದ್ಯಾರ್ಥಿಗೆ ಇಟ್ಟ ಹೆಸರದು. ಅದು ನನಗಿಟ್ಟ ಹೆಸರೇ ಎಂಬುದನ್ನು ಕಂಸದಲ್ಲೇ ಸೂಚಿಸುವೆ. ಯಾರಿಗೂ ಗೊತ್ತಾಗಬಾರದಲ್ಲ?).

ವಾರ್ಷಿಕೋತ್ಸವ ಆಚರಣೆಯ ಮಾತುಕತೆಗಳು ಒಂದು ಹಂತ ತಲುಪಿದಾಗ, ಗೆಳೆಯ ತುಂಬ್ರಿಕೊಪ್ಪ, ತನ್ನ ಎಂದಿನ ದೊಡ್ಡ ದನಿ ತೆಗೆದು 'ಅಲ್ರೋ ಮದುಮಗನ್ನs ಬಿಟ್ಟು ಮದವಿಗೆ ಹೊಂಟೀರಲ್ರೋ! ಭಾರೀ ಶ್ಯಾಣ್ಯಾರಪಾ ನೀವೂ. ಅಲ್ಲs, ಗೆಸ್ಟ್ ಯಾರ್ನ ಕರೀಬೇಕನ್ನೂದನ್ನ ಮರತಬಿಟ್ಟೀರ್ಯಲ್ಲ?' ಎಂದು ಮರೆತು ಹೋದಂತಿದ್ದ ಮುಖ್ಯ ವಿಚಾರದತ್ತ ಎಲ್ಲರ ಗಮನ ಸೆಳೆದು 'ನೋಡಿ ನಾ ಹೇಳದಿದ್ರ ಇದ್ನ ನೀವು ಮರ್‍ತs ಬಿಡತಿದ್ರೆಲ್ಲಾ?' ಎಂದು ಅಹಂ ಹೆಮ್ಮೆಪಟ್ಟ.

'ಗೆಸ್ಟ್ ವಿಚಾರ ಏನ ಮಹಾ ಬಿಡೋ, ಧಾರವಾಡದಾಗ ಎಲ್ಲಿ ನಿಂತು ಕಲ್ಲ ಹೊಡದ್ರೂ ಅದು ಒಬ್ಬ ಕವೀ ತೆಲಿಗೇ ಬಡೀತೈತೆಂತ. ಹಿಂಗಿರೂವಾಗ ಯಾರ್ನನಾದ್ರೂ ಕರೆದ್ರಾತು ಬಿಡು' ಎಂದ ಮತ್ತೊಬ್ಬ ಗೆಳೆಯ ಕರೆಣ್ಣನವರ್.

'ಹಂಗs ಮಾಡಿದ್ರಾತ್ ಬಿಡ್ಯೋ: ಇವತ್ತ ಸಂಜೀಕಡೆ ಗಾಂಧೀಚೌಕ್‌ಗೆ ಹೋಗಿ, ನಮ್ಮ ಕಾರ್ಯದರ್ಶಿ ಕೈಯಿಂದ ಒಂದ ಕಲ್ಲ ಒಗೆಸಿಬಿಡೊನು, ಅದು ಯಾರ ತೆಲೀಗೆ ಬಡೀತೈತೋ ಅವರ್ನs ಗೆಸ್ಟ್ ಆಗಿ ಕರದ್ರಾತು' ಎಂದು ತಟಕ್ಕನೆ ಮಾತು ಹಾರಿಸಿದ ಮೆಣಸಿನಕಾಯಿ. 'ಅಲ್ಲ, ಗಾಂಧೀ ಚೌಕ್ ಬ್ಯಾಡs, ಎಮ್ಮಿಕೆರೀ ಬಸ್‌ಸ್ಟ್ಯಾಂಡಿನ್ಯಾಗ ನಿಂತು ಕಲ್ಲ ಒಗೆಸಿದ್ರ ಹೆಂಗಾದೀತು? ಬರಾಬ್ಬರಿ ಗೆಸ್ಟ್ ಸಿಗಬಹುದಲ್ಲಾ?' ಎಂದು ಮತ್ತೊಬ್ಬ ಚಟಾಕಿ ಹಾರಿಸಿದ ಹುಲ್ಲಿನ ಮಠ.

ಮುಖ್ಯ ವಿಷಯದಿಂದ ಸಭೆ ಡಿವೀಯೇಟ್ ಆದದ್ದನ್ನು ಗಮನಿಸಿದ ಕಾರ್ಯದರ್ಶಿ ಕ್ರೋಚೆ – 'ಇದ್ನೇನು ಕ್ಲಾಸ್ ರೂಮಂತ ಮಾಡೀರೆನೋ ಹರಟೆ ಹೊಡಿಲಿಕ್ಕೆ? ಅಥವಾ ಇಲ್ಲ್ಯಾರಾದ್ರೂ ಹುಡುಗ್ಯಾರದಾರs? ಸಾಕು ಸಾಕು ಇದೆಲ್ಲ' ಎಂದು ತನ್ನ ಕಿಲಾಡಿ ಶೈಲಿಯಲ್ಲೇ ಅಧಿಕಾರದ ಗತ್ತನ್ನ ಚಲಾಯಿಸಿದ. 'ಇದೆಲ್ಲಾ ಸಾಕ್ರೆಪಾ. ಸುಮ್ನೆ ಯಾಕ ಟೈಮ್ ಹಾಳ ಮಾಡತೀರಿ? ಯಾರ್ನ ಗೆಸ್ಟ್ ಆಗಿ ಕರಿಯೂಣ ಅನ್ನೋದರ ಬಗ್ಗೆ ಸೀರಿಯಸ್ಸಾಗಿ ವಿಚಾರ ಮಾಡ್ರೆಲ್ಲ?' ಎಂದು ಸಭಾಪತಿಯ ನಿಭಾವಣೆಯ ಗತ್ತಿನಿಂದ ರೂಲಿಂಗ್ ನೀಡಿದೆ ನಾನು. (ಹೇಳಿ ಕೇಳಿ ಬುದ್ಧ) ಸಭೆಗೆ ಈಗ ಒಂದಿಷ್ಟು ಮೌನ ಗೌರವ ಬಂತು. ಒಂದು ಸೆಕೆಂಡ್ ಕಳೆದಿರಬೇಕು. ದೊಡ್ಡಮನಿ ಎದ್ದು ನಿಂತವನೇ ಈ ವರಸ ಚಂಪಾನ್ನ ಕರದಬಿಡೂನು' ಎಂದು ಗಟ್ಟಿಯಾಗಿ ತನ್ನ ಮನದೊಳಗಿನ ಚಂಪಾ ಪ್ರೀತಿಯನ್ನ ಅಭಿವ್ಯಕ್ತಿಸಿದ.

'ಚಂಪಾನ್ನs? ಆಕೀ ಯಾವ್ಳಲೇ? ಕಂಪ್ನೀ ನಾಟಕದಾಗ ಪಾರ್ಟ್ ಮಾಡೊ ಚಿಮಣಾನ ಹೆಸರಿದ್ದಾಂಗೈತಿ ಇದು!, ದೊಡ್ಡಮನ್ಯಾ ನಿನಗಂತೂ ಯಾವಾಗ್ಲೂ ಹೆಂಗ್ಸೂರs ಇರಬೇಕ್ ನೋಡು' ಎಂದು ತನ್ನ ಸಹಜ ಶೈಲಿಯಲ್ಲಿ ಪ್ರತಿಭಾ ಪಾಂಡಿತ್ಯ ಪ್ರದರ್ಶಿಸಿದ ವಸ್ತ್ರದ.

'ಇರ್ಲಿ ಬಿಡೋ ವಸ್ತ್ರದ, ಈ ಹಾಳಾದ ಲೆಕ್ಚರ್ ಕೇಳಿ, ಕೇಳಿ ಸಾಕಾಗಿ ಹೋಗೈತಿ, ಆಕಿ ಚಂಪಾ ಬಂದು ಒಂದೆರಡು ಕಂಪ್ನಿ ನಾಟಕದ ಡೈಲಾಗಾದ್ರೂ ಹೊಡದ್ರ ಮಜಾ ಬರ್ತೈತಿ!' ಇನ್ನೊಬ್ಬ ಗೆಳೆಯ ಬಗಡಿ ಡೈಲಾಗಿಸಿದ.

ನನಗೋ ಒಳಗೊಳಗೇ ಕಸಿವಿಸಿ. ಕನ್ನಡ ಡಿಪಾರ್ಟ್‌ಮೆಂಟಿನಿಂದ ಆಚೆ ಎಣಿಸಿ ನಡೆದರೆ ಕೇವಲ 248 ಹೆಜ್ಜೆಯಲ್ಲೇ (ಸುಮಾರು 20-25 ಪಾಟಣಿಗೆಗಳನ್ನು ಏರಬೇಕು) ಇರುವ ಇಂಗ್ಲೀಷ್ ಡಿಪಾರ್ಟ್‌ಮೆಂಟ್‌ನಲ್ಲೇ ಲೆಕ್ಚರ್ ಮಾಡುವ ಚಂಪಾಗೆ ಈ ಗತಿ ಬಂತಲ್ಲ? ಎಂದು ಒಳಗೊಳಗೇ ಯಾತನೆ. ಈ ಕನ್ನಡ ವಿಭಾಗದ ಹಣೇಬರಾನೇ ಇಷ್ಟು. ಪಂಪ, ರನ್ನ, ಕುಮಾರವ್ಯಾಸ, ಮುದ್ದಣ್ಣ ('ಣ' ಕೂಡ ಅನ್ನದೇ), ಬಹಳೆಂದರೆ ಬೇಂದ್ರೆ, ಕುವೆಂಪು–ಬಸ್! ಅಲ್ಲೇ ಮುಗೀತು, ಅವರ ಅಧ್ಯಯನ. ಹೊಸ ಹೊಸ ಸಾಹಿತಿಗಳು, ಅವರ ಸಾಹಿತ್ಯ, ಅದರ ವಿಮರ್ಶೆ – ಇವೆಲ್ಲಾ ಅದರ ಸಿಲೇಬಸ್‌ನಲ್ಲಿ ಬರೊದೇ ಇಲ್ಲ. ಹಿಂಗಾಗಿ ಚಂಪಾ 'ಆಕಿ' ಆಗೂ ಸಾಧ್ಯತೇನೆ ಹೆಚ್ಚು. ಇದಲ್ದ, ಬಹುಶಃ ಇದಕ್ಕೆ ಇನ್ನೂ ಒಂದ ಕಾರಣ ಇರಬಹುದು; ಕನ್ನಡ ಸಾಹಿತಿ ಚಂಪಾ, ಸಾಹಿತಿಯಾಗಿ ಕನ್ನಡದಿಂದ ಲಾಭ ಪಡೆದೂ ಇಂಗ್ಲೀಷ್ ವಿಭಾಗದೊಳಗ ಹೊಟ್ಟೆ ಹೊರೆಯುತ್ತಿರುವುದು. ಈ ಕಾರಣಕ್ಕೇನೇ ಅವರು 'ಪರದೇಶೀ' ಹುಡುಗೀ ಥರದ ಭಾವನೆಗಳನ್ನ ಹುಟ್ಟಿಸೋದು.

ಅದೂ ಅಲ್ದ, ಈ ಸಾಹಿತಿಗಳಿಗೆ ಹುಡುಗೀರ ಹೆಸರು ಕೊಡೊ ಹಿನ್ನೆಲೆಯಾದ್ರೂ ಏನು? ಅನ್ನುವ ವಿಚಾರ ಕೂಡ ಕಾವ್ಯ ಮೀಮಾಂಸೆಯೊಳಗ ಒಂದು ಚಿಂತನಾರ್ಹ ಸಮಸ್ಯೆಯೇ ಆಗ್ತಿದೆ. ಬಹುಶಃ ನಮ್ಮ ಬಹಳ ಸಾಹಿತಿಗಳಿಗೆ 'ಹೆಂಗರಳು' ಜಾಸ್ತಿ ಇರೋದು ಅಥವಾ ಹೆಂಗರುಗಳ ಸಂಬಂಧ ಜಾಸ್ತಿ ಇರೋದೇ ಇದಕ್ಕೆ ಕಾರಣ ಇರಬಹುದು ಅಂತ ನನ್ನ ತರ್ಕ. ಮಮ್ಮಟ, ಆನಂದವರ್ಧನರಂಥ ಮೀಮಾಂಸಕರು ಈ ಸಮಸ್ಯೆಗೆ ಯಾವ ಸಮಾಧಾನ ಹೇಳುತ್ತಿದ್ದರೋ! ಚಂಪಾಗೆ ಬಂದೊದಗಿದ ಗತಿಯ ಹಿನ್ನೆಲೆಯಲ್ಲಿ ಇಷ್ಟೆಲ್ಲ ಗಂಭೀರ ಚರ್ಚೆ ನನ್ನ ಬುದ್ಧಚಿತ್ತದಲ್ಲಿ ನಡೆದಿರುವ ಹಾಗೆಯೇ, ಇತರ ಗೆಳೆಯರ ಗಲಿಬಿಲಿಯನ್ನು ಕತ್ತರಿಸಿ ಹಾಕುವ ಧಾಟಿಯಲ್ಲಿ ಕ್ರೋಚೆ – 'ಚಂಪಾ ಖಂಡಿತ ಬೇಡ. ನಮ್ಮ ಡಿಪಾರ್ಟ್‌ಮೆಂಟಿನ ಕೆಲವು ಪ್ರೊಫೆಸರ್‌ಗಳಿಗೂ ಚಂಪಾಗೂ ಸರಿಯಿಲ್ಲ. ಅವರ್ನ ಕರೆದು ನವ್ಯಕಾವ್ಯದ ಹಾಗೂ ಅಸಂಗತ ಧಾಟಿಯ ಭಾಷಣಾ ಮಾಡಿಸಿದ್ರ ಅದು ಇವರ್ಗೆ ಸರೀಬರೂದಿಲ್ಲ. ನಾವು ಹೇಳಾಕ ಆಗಲಾರದ್ದನ್ನ ಈ 'ಮನಕಾ' ಹೇಳಿ ನಮ್ಮ ಮರ್ಯಾದೆ ತಗದ್ನಲ್ಲ? ಅಂತ ಅವರು ಕತ್ತೀಮಸೀಬಹುದು. ಈ ಕ್ರಾಂತಿಕಾರಿ ಹುಡುಗೂರು ಬೇಕಂತನs ಚಂಪಾನ್ನ ಕರದಾರs ಅಂತ. ನಮ್ಮ ಮಾಲೆ ಸೇಡು ತೀರಿಸಿಕೊಳ್ಳೂದಕ್ಕೂ ಕೆಲವ್ರು ಹಿಂದ–ಮುಂದs ನೋಡಾಕಿಲ್ಲಾ! ಯಾರಿಗೆ ಬೇಕ್ರೋ ಇದೆಲ್ಲಾ? ಸೆಮಿಸ್ಟರ್ ಸಿಸ್ಟಂ ಬ್ಯಾರೆ. ನಮ್ಮ ತಲೀ ಒಳಗ ಎಷ್ಟ ಕೂದಲದಾವನ್ನೂದನ್ನೂ ಎಣಿಸಿಕೊಂಡ ಪ್ರೊಫೇಸರ್‌ಗೂಳೂ ಅದಾರ. ಚಂಪಾನ್ನ ವಿಚಾರ ಕೈ ಬಿಡೂದs ಉತ್ತಮ' ಎಂದು ಮಾರ್ಕ್ಸ್‌ನಗಳ ಸೂಚ್ಯ ಎಚ್ಚರಿಕೆ ನೀಡಿದ. ಈ ತರ್ಕ ಸಹಜವಾಗಿಯೇ ಎಲ್ಲರ ತಲೆಯಲ್ಲಿದ್ದ (ಕೆಲವು ಅಧ್ಯಾಪಕರು ಪ್ರತಿಷ್ಠಾಪಿಸಿದ್ದ) ಎಚ್ಚರಿಕೆ ಗಂಟೆಯನ್ನು ಬಾರಿಸಿತು. ಚಂಪಾನ್ನ ಕರಸೋ ವಿಚಾರ 'ಡಿಂ' ಆಯ್ತು.

'ಪಾಪೂನ್ನ ಕರದ್ರ ಹೆಂಗಾದೀತು?' – ಹುಬ್ಬಳ್ಳಿಯಿಂದ ಎಂ.ಎ.,ಗೆ ಬರುತ್ತಿದ್ದ ಬ್ಯಾಳಿ, ಸಹಜವಾದ ತನ್ನ ಪ್ರಾದೇಶಿಕ ಪ್ರೀತಿ, ಪ್ರದೇಶದ ವ್ಯಕ್ತಿಪ್ರೀತಿಯನ್ನು ಅದುಮಿಡಲಾರದೇ ಬಡಬಡಿಸಿದ.

'ಯಾಕs, ಯಾರೂ ದೊಡ್ಡವರು ಸಿಗೂದುಲ್ಲನು ಗೆಸ್ಟ್ ಆಗಿ, ಪಾಪೂನ್ನ ಕರೆದು, ಲಾಲೀ ಹಾಡಬೇಕಂತ ಮಾಡೀಯೇನು?'– ತಕ್ಷಣ ಪ್ರತಿಕ್ರಿಯಿಸಿದ ಇನ್ನೊಬ್ಬ ಗೆಳೆಯ ಹಳೇಮನಿ. ಚಂಪಾ, ಪಾಪುಗಳಂಥ ವಿಚಾರವಂತೆ ಸಾಹಿತಿಗಳಿಗೆ ಅವರ ಹೆಸರಿನ ಸಣ್ಣೀಕರಣದಿಂದಾಗಿ ಆಗ್ತಾ ಇರೋ ಅಧ್ವಾನಗಳನ್ನು ಗಮನಿಸಿದ್ರೆ, ಯಾಕಾದ್ರೂ ಇವರು ಇಂಥ ಹೆಸರು ಇಟ್ಕೋತಾರೋ – ಎಂದು ನನಗೆ ಎಲ್ಲಿಲ್ಲದ ಯಾತನೆ! 'ಪಾಪೂನೂ ಬ್ಯಾಡ' ಎಂದು ಕ್ರೋಚೆ ಕಾರ್ಯದರ್ಶಿ ವಾಣಿಯನ್ನು ಉವಾಚಿಸಿದಾಗ ಪಾಪು ಸಹಿತ ಬಿದ್ದು ಹೋದ್ರು.

'ನಾ ಒಬ್ಬರ ಹೆಸರ ಹೇಳ್ಲಾ?' ಎಂದೆ ಅಳುಕುತ್ತ ನಾನು. 'ಮಠಾಧಿಪತಿಗಳ್ನ ಬಿಟ್ಟು ಹೇಳೂದಾದ್ರ ನೀ ಹೇಳಬಹುದು' ಎಂದು ಕ್ರೋಚೆ ನನ್ನ ಮಠಾಧಿಪತಿ ಪ್ರೀತಿಗೆ ಅವಮಾನ ಮಾಡಿದ. ಮಠಾಧಿಪತಿಗಳಿಗೂ ನಮ್ಮ ವಿಭಾಗಕ್ಕೂ ಇರುವ ಅಂಟು, ನಂಟು, ಗಂಟು ಎಷ್ಟೊಂದು ಗಾಢ, ಮಧುರ, ಬಂಧುರ ಎಂಬುದು ಗೊತ್ತಿದ್ದೂ, ಕ್ರೋಚೆ ನನಗೆ ಬೇಕಂತಲೇ ಈ ಮಾತನ್ನು ಚುಚ್ಚಿದ್ದ. 'ಏ ಕ್ರೋಚೇ, ಮಠಾಧಿಪತಿಗಳಲ್ಲ, ಮಠಾಧಿಪತಿಗಳ ಕಾವಿ ಕಳೆದು, ಅವರ್ನ ಬತ್ತಲೇ ಮಾಡಿ, ಪರಾಜೆಗಿಟ್ಟ ಕಟ್ಟೀಮನಿ ಅವರ್ನ ಕರಸಬಹುದಾ ಅನ್ನೂದು ನನ್ನ ವಿಚಾರ' – ಎಂದೆ ನಾನು. ಕಟ್ಟೀಮನಿ ಎಂದೊಡನೆ ಎಲ್ಲರಲ್ಲೂ ಮಿಂಚಿನ ಸಂಚಾರವಾಯ್ತು. 'ಕರೆಕ್ಟ್ ಒಳ್ಳೇ ಹೆಸರು' ಎಂದು ನಾಲ್ಕಾರು ಗೆಳೆಯರು ಕೂಗಾಡತೊಡಗಿದರು. ಕ್ರೋಚೆ ಅದ್ಯಾಕೋ ಈ ಹೆಸರನ್ನ ಇಷ್ಟಪಡಲಿಲ್ಲ. 'ಕಟ್ಟೀಮನಿ ಕರೆಸಿ, ಸಭಾದೊಳಗ ಏನಾದ್ರೂ ಒಂದಿಷ್ಟು ಹೆಚ್ಚು ಕಡಮಿ ಆಯ್ತಂದ್ರ, ಆ ಮನಸಾನ ಕಡೀಂದ ಉಗಿಸಿಕೊಳ್ಳವ್ರು ಯಾರು? ಮೊದಲS ನಿಷ್ಠೂರ ಮಾತಿನ ಕ್ರಾಂತಿಕಾರಿ ಮನಸಾ. ಇದS ಅವಕಾಶ ಅಂತ ಈ ವಿಭಾಗದ ಕೆಲವು ಅಧ್ಯಾಪಕ, ಪ್ರವಾಚಕ, ಪ್ರಾಧ್ಯಾಪಕ, ಪೀಠಾಧಿಪತಿಗಳ ಒಳಹೂರಣ ಬಿಚ್ಚಿ ತೋರ್ಸಾಕ ಹತ್ತಿದ್ರ.... ಹಂ, ದಾರೀ ಮ್ಯಾಗಿನ ದೆವ್ವನ್ನ ಮೈಮ್ಯಾಲ ಹಾಕ್ಕೊಂಡಂಗಾದೀತು.' ಮತ್ತೆ ಮಾರ್ಕ್ಸಿನ ಭಯ, ಸೆಮಿಸ್ಟರ್‌ನ ಮಾಯ. ಎಚ್ಚರಿಕೆಯ ಗಂಟೆಯು ಬಡಿತ. ಕಟ್ಟೀಮನಿ ಕೂಡ ಒಳಮನೆ ಸೇರಿದರು.

ಗೆಸ್ಟ್‌ಗಳ ಸುಗ್ಗಿ, ಸಮೃದ್ಧಿ ಇರುವ ಮಹಾನಗರದಲ್ಲಿ ಒಬ್ಬ ಗೆಸ್ಟನ್ನು ಹುಡುಕಲು ನಡೆಸಿದ ನಮ್ಮ ಪೀಕಲಾಟ ಗೆಸ್ಟ್ ಗಣಂಗಳಿಗೆಲ್ಲ ಅಸಹ್ಯ ಮೂಡಿಸುವಂತಿತ್ತು. ಇದರಲ್ಲಿ ನಮ್ಮ ತಪ್ಪೂ ಇರಲಿಲ್ಲ ಅಂತ ಹೇಳಿದರೆ ಅದೇನೋ ಜಾರಿಕೊಳ್ಳೋ ಬುದ್ಧಿ ಅಲ್ಲ. ಯಾಕೆಂದರೆ ಅಷ್ಟು ಸುಲಭವಾಗಿ ಪರಿಹರಿಸುವ ಸಮಸ್ಯೆ ಇದಾಗಿರಲಿಲ್ಲ. ಕರೆತರಬಹುದಾದ ವ್ಯಕ್ತಿಗೂ, ವಿಭಾಗಕ್ಕೂ ವಿಭಾಗದೊಳಗಿನ ಗುರುವೃಂದಕ್ಕೂ ಇರುವ ಸಂಬಂಧಗಳ ಹಿನ್ನೆಲೆಯಲ್ಲಿ ಇದೆಲ್ಲ ನಿರ್ಧಾರವಾಗಬೇಕು. ಇಲ್ಲಾಂದ್ರೆ ಪರಿಣಾಮ ನೆಟ್ಟಗಾಗಲಾರದು ಎಂದು ಎಲ್ಲರಿಗೂ ಗೊತ್ತಿತ್ತು. ಎಂ.ಎ. ಮೊದಲ ವರ್ಷ ಮೊದಲ ಕ್ಲಾಸಲ್ಲೇ ಒಬ್ಬ ಗುರುಗಳು ಹೇಳಿದ್ದ – ಬಾಳ ಎಚ್ಚರಿಕೆಯಿಂದ ಇರಬೇಕಾ, ಇದು ಸೆಮಿಸ್ಟರ್ ಸಿಸ್ಟಂ ಐತಿ, ನಿಮ್ಮ ಜುಟ್ಟ ಎಲ್ಲಾ ನಮ್ಮ ಕೈಯೊಳಗS ಇರತಾವ. ಯಾರಾದ್ರೂ ಹೆಚ್ಚಗಿ ಬಾಲಾ ಬಿಚ್ಚಿದ್ರ, ಹಾರ್‍ಯಾಡಿದ್ರ, ಹೇಳಿದ್ದಂಗ ಕೇಳದಿದ್ರ ಮತ್ತ ಇಲ್ಲದ ಶ್ಯಾಣ್ಯಾತನ ತೋರ್ಸಾಕ ಹೊಂಟ್ರ ಅಂಥವರ ಗತಿ ನೆಟ್ಟಗಾಗೂದಿಲ್ಲ – ಎಂಬ ಎಚ್ಚರಿಕೆಯ ಮಾತು ನಮ್ಮೆಲ್ಲರ ಮನೋಮಂದಿರದ ಪವಿತ್ರ ಗಂಟೆಯಾಗಿ ನಿತ್ಯ ಬಾರಿಸುತ್ತಲೇ ಇತ್ತು. ಇದು ನಮ್ಮೆಲ್ಲರಲ್ಲಿ ವಯಸ್ಸಿಗೆ ತೀರ ಸಹಜವಾದ ಭಯ, ಭಕ್ತಿ, ವಿನಯ,

ಸೌಜನ್ಯಗಳಂಥ ಆದರ್ಶ ಗುಣಗಳನ್ನೂ ಪ್ರತಿಷ್ಠಾಪಿಸಿತ್ತು. ಕೈಯೊಳಗೆ ಜೀವ ಹಿಡಿದು, ಅಧ್ಯಾಪಕರು ಕಂಡಾಗಲೆಲ್ಲ ಹಲ್ಲು ಗಿಂಜುತ್ತ (ಒಳಗೆ ನಗೆ ಇರದಿದ್ದರೂ) ಸೌಜನ್ಯಪೂರ್ವಕ ನಮಸ್ಕಾರ ಹಾಕುತ್ತ (ಒಳಗೆ ಕ್ರೋಧದ ಉರಿ ಇದ್ದರೂ) ಮೆತ್ತನ್ನ ಮಳ್ಳಿಗಳ ಹಾಗೆ ಓಡಾಡುತ್ತಿದ್ದ ನಮಗೆಲ್ಲ ಯಾವಾಗಾದ್ರೂ ಈ 'ಎಮ್ಮೇ' ಮುಗದೀತೋ, ಸುಸೂತ್ರ ರಿಜಲ್ಟ್ ಬಂದೀತೋ ಎಂಬ ಭಯ, ಆತಂಕ. 'ಎಮ್ಮೇ' ಗಳಿಸೋ ಕಷ್ಟ ನಮ್ಮನ್ನೆಲ್ಲ ಕೋಣಗಳಷ್ಟು ದಡ್ಡುಗಟ್ಟಿಸಿಬಿಟ್ಟಿತ್ತು. ನೊಂದ ನೋವ ನೋಯದವರೆತ್ತ ಬಲ್ಲರಯ್ಯಾ?

'ಈ ಎಲ್ಲಾ ಗೋಜಿಗೆ ಹೋಗೋದೇ ಬೇಡ' ಎಂದ ಕ್ರೋಚಿ 'ವಿಭಾಗದ ಹಿರಿಯ ಪ್ರಾಧ್ಯಾಪಕರೊಬ್ಬರನ್ನೇ ಗೆಸ್ಟ್ ಆಗಿ ಕರದು ಸಿಂಪಲ್ ಆಗಿ ಕಾರ್ಯಕ್ರಮ ಮುಗಿಸಿಬಿಡೋಣು' ಎಂಬ ಭಯಸಮನ್ವಯದ ಹಿತವಚನವನ್ನು ಉಪನ್ಯಾಸಿಸಿದ. ನಮ್ಮೆಲ್ಲರ ಭವಿಷ್ಯದ ದೃಷ್ಟಿಯಿಂದ. ಈ ಸೂಚನೆ ಒಳಿತಾದದ್ದೇ ಆಗಿತ್ತು. ಆದರೆ ಈ ಸಮಸ್ಯೆಯೂ ಅಷ್ಟು ಸಣ್ಣದಾಗಿರಲಿಲ್ಲ. ಹಿರಿಯ ಪ್ರಾಧ್ಯಾಪಕರೆಂದರೆ ಯಾರು? ವಯಸ್ಸಿನಲ್ಲೋ? ಹುದ್ದೆಯಲ್ಲೋ? ಯಾವುದೇ ಒಂದು ಕ್ರೈಟೀರಿಯಾ ಇಟ್ಟುಕೊಂಡು ಒಬ್ಬರನ್ನ ಕರೆದರೂ, ಅದು ಮತ್ತೊಬ್ಬರಿಗೆ ಹಾಗೂ ಆ ಮತ್ತೊಬ್ಬರ ಗುಂಪಿನವರಿಗೆ ಅಸಮಾಧಾನವನ್ನು ಖಂಡಿತ ಹುಟ್ಟಿಸುತ್ತಿತ್ತು. ಈ ಅಸಮಾಧಾನದ ಪರಿಣಾಮ ನೇರವಾಗಿ ಸೆಮಿಸ್ಟರ್ ಸಿಸ್ಟಂ ಮೂಲಕ ಹಾಯ್ದು ಬಂದು ನಮ್ಮ ಮೇಲೆಯೇ ಆಗುವುದು ಖಂಡಿತ. ಏನೆಲ್ಲ ವಿಚಾರ ಮಾಡಿದರೂ ಅದು ಗುಡ್ಡ ಸುತ್ತಿ ಮೈಲಾರಕ್ಕೆ ಬರುವ ಹಾಗೆ ಕೊನೆಗೆ ನಮ್ಮ 'ಎಮ್ಮೇ'ಗೇ ಬಂದು ತಳುಕು ಹಾಕಿಕೊಳ್ಳುತ್ತಿತ್ತು. ಈ 'ಎಮ್ಮೇ'ಯನ್ನು ಪಡೆಯಲು ಇಷ್ಟೊಂದು ಪಡಿಪಾಟಲು ಪಡಬೇಕೆಂಬ ಸತ್ಯ ಮೊದಲೇ ಏನಾದರೂ ಗೊತ್ತಾಗಿದ್ದರೆ, ಸರಕಾರ ಕೊಡುವ ಸಾಲ ಪಡೆದು, ನಾಲ್ಕು ಒಳ್ಳೆಯ ತಳಿಯ ಎಮ್ಮೆಗಳನ್ನ ಕೊಂಡು ಭರ್ಜರಿ ಹಾಲೋದ್ಯಮ ಮಾಡಿ ಸಾಕಷ್ಟು ಧನವಂತರಾಗಬಹುದಿತ್ತು. ಆದರೆ ಈಗ ಕಾಲ ಮಿಂಚಿತ್ತು. 'ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು?' ಎಂಬ ಮಾತನ್ನ ನೆನೆಯುತ್ತ ಅಂತೂ ಮೌನದಲ್ಲೇ ನಮ್ಮ 'ಎಮ್ಮೇ' ಗಳಿಕೆಯ ಸೌಜನ್ಯ ನಡವಳಿಕೆಯ ನಾಟಕವನ್ನು ಮುಂದುವರೆಸಿದ್ದೆವು.

ಓ! ಇಷ್ಟಾದರೂ ನಮ್ಮ ಗೆಸ್ಟಾನ್ವೇಷಣೆಯ ಕಾರ್ಯ ಇನ್ನೂ ಮುಗಿದಿರಲೇ ಇಲ್ಲ. ಹೇಗಾದರೂ ಮಾಡಿ ಈ ಕಾರ್ಯಕ್ರಮವನ್ನು ಮಾಡಿ ಮುಗಿಸಲೇಬೇಕಿತ್ತು. ಕಾರ್ಯಕಾರಿ ಸಮಿತಿಯ ಹನ್ನೊಂದು ಜನ ಬುದ್ಧಿವಂತರ ತಲೆ ತಿನ್ನುತ್ತಿದ್ದ ಈ ಕಾರ್ಯಕ್ರಮ ಕೀಟ ಅವರ ಕರ್ಮದ ಫಲವಾಗಿಯೂ ಕಾಡುತ್ತಿತ್ತು.

ಈ ಹಂತದಲ್ಲೇ ನನ್ನ ತಲೆಯಲ್ಲಿ ಇನ್ನೊಂದು ವಿಚಾರ ಚಕ್ಕನೇ (ಈ ಚಕ್ಕನೆ – ಶಬ್ದವನ್ನು ನಮ್ಮ ಪಾಶ್ಚಾತ್ಯ ಕಾವ್ಯಮೀಮಾಂಸೆಯ ಪ್ರವಾಚಕರು ಕಲಿಸಿದ್ದು) ಹೊಳೆಯಿತು. 'ಈ ಸರೆ ನಾನು ಹೇಳುವ ಹೆಸರು ಯಾವುದೇ ರೀತಿಯ ಗದ್ದಲಕ್ಕೂ ಸಿಗದ್ದು, ನಾ ಹೇಳಿದ್ದನ್ನ ನೀವು ಎಲ್ಲಾರೂ ಒಪ್ಪಿಕೊಳ್ತೇವೆ ಅಂತ ಮಾತು ಕೊಟ್ರೆ ಮಾತ್ರ ಹೇಳ್ತೇನಿ. ಇಲ್ಲಾಂದ್ರ ನೀವು ಏನಾರಽ ಮಾಡಿಕೊಳ್ರಿ' – ಎಂದು ಕಡ್ಡೀ ತುಂಡು ಮಾಡಿದ ಹಾಗೆ ಮಾತಾಡಿ ಎಲ್ಲರನ್ನೂ ನಾನು ನನ್ನ ಕೈಯಳತೆಗೆ ತೆಗೆದುಕೊಂಡೆ. 'ಮಹಾದುರಹಂಕಾರಿ ಇವ, ತನ್ನ ಮಾತಽ ಎಲ್ಲರೂ ಕೇಳಬೇಕನ್ನೂದು ಇಂವನ ಪ್ರತಿಷ್ಠೆ' ಎಂದು ಒಳಗೊಳಗೇ ಅಂದುಕೊಂಡಿರಬಹುದಾದ ಬಹುತೇಕ ಸ್ನೇಹಿತರು – ಈತ ಯಾರ ಹೆಸರನ್ನ ಸೂಚಿಸಬಹುದು? ಎಂಬ ಪ್ರಶ್ನಾರ್ಥಕ ಕುತೂಹಲದಿಂದ 'ಆಯ್ತು ಹೇಳ್ನೋಡೋನು' ಎಂದು ಅರೆ ಒಪ್ಪಿಗೆ ಸೂಚಿಸಿದರು. ಅವರು ಅಷ್ಟನ್ನೂದೇ ತಡ, 'ಹಂಗಾರ ಬೇಂದ್ರೆಯವರ್ನ ಕರದಬಿಡೂನು, ಹೆಂಗೂ ಜ್ಞಾನಪೀಠ ಪಡೆದ ಹಿರಿಯ ಸಾಹಿತಿ, ಅಷ್ಟಽ ಅಲ್ದಽ ಸ್ಟೂಡಂಟ್ಸ್ ಹೋಗಿ ಕರದ್ರ ಇಲ್ಲನ್ನೂದುಲ್ಲಂತ ಅವರು' ಎಂದು ದಡಬಡಿಸಿಬಿಟ್ಟೆ. ಎಲ್ಲರೂ ದಂಗಾಗಿಹೋಗಿದ್ದರು. ಕ್ರೋಚೇಗಂತೂ ಈ ಹೆಸರು ಭಾರೀ ಹಿಡಿಸಿತು. 'ನಾನೇ ಮೊದಲು ಈ ಹೆಸರು ಸೂಚಿಸಬೇಕಿತ್ತು, ನನ್ನ ಈ ಹಾಳಾದ ತಲೀಗೆ ಅದು ಹೊಳೀಲೇ ಇಲ್ಲವಲ್ಲ!' ಎಂದು ಆತ ಒಳಗೇ ನೊಂದುಕೊಳ್ಳುತ್ತಿರುವಾಗಲೇ 'ಹಾಂ, ಬುದ್ಧ ಅಂತ ನಿನಗ ನಾವೆಲ್ಲಾ ಯಾಕ ಹೆಸರಿಟ್ಟೇವಿ ಗೊತ್ತಾ?' ಎಂದು ನನ್ನ ಬುದ್ಧತ್ವದ ಗುಟ್ಟನ್ನು ಒಡನುರಿಸಿಬಿಟ್ಟ. ಕ್ರೋಚೆಗೆ ಇದು ಇನ್ನೂ ಹೆಚ್ಚಿನ ಹೊಟ್ಟೆ ಉರಿಗೆ ಕಾರಣವ್ಹಾಯ್ತು.

ಅಂತೂ ಬೇಂದ್ರೆಯವರ ಹೆಸರು ಸರ್ವಾನುಮತದಿಂದ ಸ್ವೀಕೃತವಾಗಿ ನಮ್ಮ ವಾರ್ಷಿಕೋತ್ಸವ ಆಚರಣಾ ಸಮಿತಿಯ ಚರ್ಚೆ ಒಂದು ಮುಖ್ಯ ಘಟ್ಟ ತಲುಪಿತು. ಈ ಹಂತದಲ್ಲಿ ಇನ್ನೂ ಒಂದು ಮುಖ್ಯ ಸಮಸ್ಯೆ ಧುತ್ತೆಂದು ನಮ್ಮೆದುರು ನಿಂತಿತು. ಅದೆಂದರೆ, ಬೇಂದ್ರೆಯವರನ್ನ ಕೇಳಿ, ಒಪ್ಪಿಸಲಿಕ್ಕೆ ಯಾರು ಹೋಗೋದೂ? ಎಂಬ ಸಮಸ್ಯೆ. ದೊಡ್ಡ ಸಾಹಿತಿ, ಖಡಕ್ ಶೈಲಿಯಲ್ಲಿ ನೇರವಾಗಿ ಮಾತಾಡಿ ನಮ್ಮ ಶಬ್ದಬ್ರಹ್ಮತ್ವದ ಸ್ವರೂಪವನ್ನು ಕ್ಷಣಾರ್ಧದಲ್ಲಿ ತೋರಿಸಿಬಿಡುತ್ತಿದ್ದ ಆ ವ್ಯಕ್ತಿಯ ಜೊತೆ ನಮ್ಮಂಥ ಎಮ್ಮೇಕರುಗಳು (ಎಂ.ಎ. ಮುಗಿವ ಮೊದಲು ಎಮ್ಮೇಕರು. ಮುಗಿದ ನಂತರ ಎಮ್ಮೇ) ಹ್ಯಾಗೆ ಮಾತಾಡೋದು? ಅವರ್ನ ಹ್ಯಾಗೆ ಎದುರಿಸೋದು? ಈ ಕೆಲಸ ಮಾಡಲು ಯಾರಿಗೂ ಧೈರ್ಯವಿರಲಿಲ್ಲ. ನಮ್ಮ ಸೆಮಿಸ್ಟರ್ ಸಿಸ್ಟಂ, ಬರೀ ಕ್ಲಾಸು, ಡಿಪಾರ್ಟ್‌ಮೆಂಟಿನ ಒಳಗಡೆ ಮಾತ್ರವಲ್ಲ, ನಮ್ಮ ಹೊರಗಡೆಯ ಜೀವನದಲ್ಲೂ ಧೈರ್ಯ ತೋರಲಾರದ ಹಾಗೆ ಚೆನ್ನಾಗಿ ಕಸಿ ಮಾಡಿತ್ತು. ಆದರೂ ಈ ಕೆಲಸಕ್ಕೆ ಯಾರಾದರೂ ಹೋಗಲೇ ಬೇಕಾಗಿತ್ತಲ್ಲವೆ? ಕಾರ್ಯದರ್ಶಿ ಕ್ರೋಚೆಗಂತು ಅದು ಬಿಡದ ಕರ್ಮ. ಇನ್ನು ಆ ಹೆಸರು ಸೂಚಿಸಿದ

ತಪ್ಪು ನನ್ನದಾಗಿದ್ದರಿಂದ ಕ್ರೋಚೇನ ಜೊತೆಗೆ ಹೋಗುವ ಜವಾಬ್ದಾರಿಯನ್ನು ಎಲ್ಲರೂ ನನ್ನ ಕೊರಳಿಗೇ ಕಟ್ಟಿದರು.

ಸರಿ, ನಮ್ಮಿಬ್ಬರ ಸವಾರಿ ಸಾಧನಕೇರಿಯತ್ತ ಸಾಗಿತು. ನೀಮುಂದು ನೀಮುಂದು ಎಂದು ಒಬ್ಬರೊಬ್ಬರನ್ನು ಮುಂದೆ ದೂಡುವಂತೆ ಲಘು ಜಗಳ ಮಾಡುತ್ತ ಕೆಲಗೇರಿ ದಾರಿಯಲ್ಲಿ ಹೋಗುತ್ತಿದ್ದ ನಮ್ಮಿಬ್ಬರನ್ನು ನೋಡಿದವರು ಏನು ಅರ್ಥ ಮಾಡಿಕೊಂಡರೋ ದೇವರಿಗೇ ಗೊತ್ತು. ಹೀಗೆ ಕಿತ್ತಾಡುತ್ತಲೇ ನಾವು ಬೇಂದ್ರೆಯವರ ಮನೆಯ ಗೇಟಿನ ಹತ್ತಿರ ಬಂದಿದ್ದೆವು. ಎದೆ ಹೊಡೆದುಕೊಳ್ಳುತ್ತಿದ್ದವು. ಗೇಟಿನ ಎದುರು ನಿಂತು 'ಹೇಗೆ ಒಳಗೆ ಹೋಗೋದು?' ಎಂಬ ಪ್ರಶ್ನೆಯ ಒಡಮುರಿಗೆಯಲ್ಲಿ ಸಿಕ್ಕು ಒದ್ದಾಡುತ್ತಿದ್ದೆವು – "ಯಾರ‍್ರೆಪಾ ಅವ್ರು, ಏನ್ ಬೇಕಾಗಿತ್ತು? ಒಳಗ ಬರ‍್ರೆಲ್ಲಾ" ಎಂಬ ಅದ್ಭುತ ಅರ್ಥಪೂರ್ಣ ಧ್ವನಿ ಎಲ್ಲಿಂದಲೋ ಬಂದು ಕಿವಿಯೊಳಗೆ ಹೊಕ್ಕಾಗ ನಾವಿಬ್ಬರೂ ಪರಸ್ಪರ ಮುಖನೋಡಿಕೊಂಡೆವು. ಮತ್ತೆ ನೋಡುತ್ತೇವೆ, ಮನೆಯ ಮುಂಭಾಗದಲ್ಲಿ ನಿಂತಿದ್ದ ಬೇಂದ್ರೆಯವರೇ ನಮ್ಮನ್ನು ಕರೆಯುತ್ತಿದ್ದರು! ಜಂಘಾಬಲವೇ ಉಡುಗಿಹೋದಂತಿದ್ದ ನಮ್ಮಲ್ಲಿ, ಹೋದ ಜೀವ ಮರಳಿ ಬಂದಂತಾಗಿತ್ತು. ಗೇಟ್ ತೆಗೆದು ಒಳನಡೆದೆವು. 'ಬರ‍್ರಿ, ಬರ‍್ರಿ', ಎನ್ನುತ್ತ ನಮ್ಮನ್ನು ಮನೆಯೊಳಗೆ ಕರೆದೊಯ್ದು, 'ಕೂಡ್ರಿ ಕೂಡ್ರಿ', ಎಂದು ಕೂಡ್ರಿಸಿ ಕಲ್ಲುಸಕ್ಕರೆ ತಂದುಕೊಟ್ಟು 'ಬಾಯಾಗ ಹಾಕ್ಕೊಳ್ರಿ' ಎನ್ನುತ್ತ, ಎಲ್ಲಿಂದ ಬರೋಣಾಯ್ತು? ನಿಮ್ಮ ಹೆಸರೇನು? ಏನ್ ಕೆಲ್ಸ ಆಗಬೇಕಾಗಿತ್ತು? ಎಂದು ಬೇಂದ್ರೆಯವರೇ ಮಾತುಗಳನ್ನ ಆರಂಭಿಸಿದಾಗ ಕಿಲಾಡಿ ಕ್ರೋಚೆಗೆ ಈಗ ಸಂಪೂರ್ಣ ಮೈಚಳಿ ಬಿಟ್ಟು ಹೋಗಿತ್ತು. ಸಂದರ್ಭ ಅನುಕೂಲಕಾರಿಯಾದುದನ್ನು ಅರಿತ ಅವಕಾಶವಾದಿ ಕ್ರೋಚೆ; 'ನನ್ನ ಹೆಸರು ಕ್ರೋಚೆ. ನಾನು ಕನ್ನಡ ವಿಭಾಗದ ಕನ್ನಡ ಸಂಘದ ಕಾರ್ಯದರ್ಶಿ. ಇಂವ ನನ್ನ ಫ್ರೆಂಡು (ಹೆಸರನ್ನು ಮಾತ್ರ ಹೇಳಲಿಲ್ಲ). ಏನಿಲ್ಲ ಸರ್, ನಮ್ಮ ಸಂಘದ ವಾರ್ಷಿಕೋತ್ಸವ ಮಾಡಾಕೆ ಹತ್ತೇವ್ರಿ, ಅದಕ್ಕೆ ನೀವು ಚೀಪ್ ಗೆಸ್ಟ್ ಆಗಿ ಬರ‍್ರೆಂತ ಕೇಳಾಕೆ ಬಂದೇವ್ರಿ' ಎಂದು ಒಂದೇ ಉಸುರಿನಲ್ಲಿ, ಹೇಳಬೇಕಾದದ್ದನ್ನೆಲ್ಲ ಹೊರಹಾಕಿಬಿಟ್ಟ. 'ನಿಮಗ ಬೇಕಾಗಿರೋದು ಚೀಪ್ ಗೆಸ್ಟೋ? ಏನ್ ಚೀಫ್ ಗೆಸ್ಟೋ?' ಎಂದು ನಗೆಚಾಟಿಕೆ ಮಾಡಿದ ಆ ಮುದುಕ, (ಮುದುಕ = ಚಂಪಾ, ಪ್ರೀತಿ + ವ್ಯಂಗ್ಯ + ಸಿಟ್ಟು, ಈ ಮೂರನ್ನೂ ಒಟ್ಟುಗೂಡಿಸಿ ಬೇಂದ್ರೆಯವರನ್ನು ಕರೆಯುತ್ತಿದ್ದ ಹೆಸರದು) 'ಏನಡ್ಡೀಯಿಲ್ಲ, ನೀವು ಇಷ್ಟೊಂದು ನಂಬಿಕೆ ಇಟಗೊಂಡು ಕೇಳಾಕ ಬಂದೀರಂದ ಮ್ಯಾಲ, ಇಲ್ಲಂದ್ರ ತಪ್ಪಾಗತೈತಿ. ಬರ‍್ತೇನಿ ಬರ‍್ತೇನಿ. ಅಂ ಅಂದಂಗ ಎಂದ ಇಟಗೊಂಡೀರೀ ಕಾರ್ಯಕ್ರಮಾನs' ಎಂದು ಕೇಳಿದರು. ಅವರಿಗೆ ಅನುಕೂಲವಾಗುವ ಹಾಗೆ ಒಂದು ದಿನವನ್ನು ನಿರ್ಧರಿಸಿಕೊಂಡೆವು ನಾವು. ಅಂತೂ ಬಂದ ಕೆಲಸ ನಿರುಮ್ಮಳವಾಗಿ ನಡೆದುಹೋಗಿತ್ತು. ನಾವಿಬ್ಬರೂ ಖುಷಿಯಿಂದ ಉಬ್ಬಿಹೋಗಿದ್ದೆವು. ಬೇಂದ್ರೆಯವರು ಇಷ್ಟು ಸರಳಾಗಿ ಇಷ್ಟೊಂದು ಪ್ರೀತಿಯಿಂದ ಗೆಸ್ಟ್ ಆಗಿ ಬರಲು ಒಪ್ಪಿದ್ದು,

ಅವರನ್ನು ಒಪ್ಪಿಸಲು ಬಂದಿದ್ದ ನಮಗೆ, ಎಷ್ಟು ಪಾಸಾಗುವಾಗ ಆಗಬಹುದಾದಷ್ಟು ಸಂತೋಷವನ್ನು ಉಕ್ಕಿಸಿತ್ತು.

'ಹಂಗಾದ್ರ ನಾವು ಬರ್ತೇವ್ರಿ ಸರ್,' ಎಂದ ಕ್ರೋಚೆ. 'ಬರ್ತೀರ್‍ಯಾ ಆಯ್ತು. ಅವತ್ತ ಎರಡ ಘಂಟೇಕ್ಕಂದ್ರ ತಯಾರಾಗಿರ್ತೇನಿ, ನೀವು ಬಂದ ಬಿಡ್ರಿ' ಎನ್ನುತ್ತ ಬೇಂದ್ರೆಯವರು ನಮ್ಮೊಂದಿಗೆ ಕಾಲು ಹಾಕುತ್ತ ಮನೆಯ ಬಾಗಿಲ ಕಡೆ ಬರತೊಡಗಿದರು. ಹಾಗೆ ಬರುವಾಗಲೇ ಅವರು ತಮ್ಮಾ ನಿನ್ನ ಹೆಸರೇನು? ಗೊತ್ತs ಆಗ್ಲಿಲ್ಲ? ಎಂದು ಅತ್ಯಂತ ಸಹಜವಾದ ರೀತಿಯಲ್ಲಿ ಕೇಳಿದರು (ಕ್ರೋಚೆ ನನ್ನ ಹೆಸರನ್ನು ಹೇಳದೇ ಕೇವಲ ಫ್ರೆಂಡ್ ಎಂದು ಪರಿಚಯ ಮಾಡಿದ್ದನ್ನು ಅವರ ಮಾತು ವ್ಯಂಗಿಸುವಂತಿತ್ತು).

'ನನ್ನ ಹೆಸರು ಬಸಪ್ಪ ಅಂತರೀ ಸರ್' ಎಂದೆ. ಭಾಳ್ ಚೋಲೊ ಆಯ್ತು. ಆಂ ನಿಮ್ಮಿಬ್ಬರ ಹೆಸರೂ ಛಂದ ಅದಾವ್ರೆಪಾ. ಒಬ್ಬಾಂವಾ ಪಾಶ್ಚಾತ್ಯರೊಳಗ ಶ್ರೇಷ್ಠ ಮಟ್ಟದ ಕಾವ್ಯಚಿಂತಕ, ಇನ್ನೊಬ್ಬಾಂವ ಹನ್ನೆರಡ್ನೇ ಶತಮಾನದೊಳಗ ದೊಡ್ಡ ಕ್ರಾಂತೀನೇ ಮಾಡಿದ ಕ್ರಾಂತಿ ಪುರುಷ. 'ಏನ್ ಓದ್ತೀರೆಪಾ ಅಂದ್ಹಂಗ?' ಎಂದರು ಬೇಂದ್ರೆ. 'ಎಂ.ಎ. ಫೈನಲ್ ಸರ್' ಎಂದು ನಾನು ತಕ್ಷಣ ಉತ್ತರಿಸಿದೆ. 'ಹೀಂಗs ಚೊಲೋ ಆತು. ಚೊಲೋ ಆಯ್ತು, ಪಾಸಾಕ್ಕೀರಿ ನೀವು ಪಾಸಾಕ್ಕೀರಿ' ತಮ್ಮ ಸಹಜ ಮಮತೆಯ ಧಾಟಿಯಲ್ಲೇ ಬೇಂದ್ರೆಯವರು ನಮ್ಮಿಬ್ಬರನ್ನು ಹರಸಿದ್ದರು. ಆದರೆ ಕ್ರೋಚೆಗೆ ಬೇಂದ್ರೆಯವರ ಈ ಮಾತು ಅದ್ಯಾಕೋ ತಲೆಯಲ್ಲಿ ಗುಂಯ್‌ಗುಡತೊಡಗಿತೆಂದು ಕಾಣುತ್ತದೆ. ಅದೂ ಅಲ್ದೆ, ಎಮ್ಮೇ ಪಾಸಾಗಲು ಎರಡು ವರ್ಷಗಳಿಂದ ನಾವೆಲ್ಲ ಪಡುತ್ತಿದ್ದ ಪಾಡು, ರೂಢಿಸಿಕೊಂಡಿದ್ದ ನಟನೆ, ಸೆಮಿಸ್ಟರ್ ಸಿಸ್ಟಂನ ಭಯ, ಅದರ ಬಗ್ಗೆ ನಮ್ಮ ಗುರುಗಳು ಮತ್ತೆ ಮತ್ತೆ ಬಾರಿಸುತ್ತಿದ್ದ ಎಚ್ಚರಿಕೆಯ ಗಂಟೆ – ಇಷ್ಟೆಲ್ಲವೂ ಅವನ ಮನಸ್ಸಿನಲ್ಲಿ ಒಮ್ಮೆಲೇ ಕ್ರೋಡೀಕರಣಗೊಂಡು, ಬೇಂದ್ರೆಯವರು ಅತ್ಯಂತ ಸರಳವಾಗಿ ಹೇಳಿದ 'ಪಾಸಾಕ್ಕೀರಿ ನೀವು ಪಾಸಾಕ್ಕೀರಿ' ಎಂಬ ಮಾತಿನೊಂದಿಗೆ ಘರ್ಷಣೆಗಿಳಿದದೆಂದು ತೋರುತ್ತದೆ. ಮೊದಲೇ ಕಿಲಾಡಿ ಬೇರೆ, 'ಅಲ್ಲಾ ಸರ್ ಇಷ್ಟು ಸರಳವಾಗಿ ಪಾಸಾಕ್ಕೀರಿ ಅಂತ ಹೇಳ್ತೀರಲ್ಲಾ ಅದ್ಹೆಂಗ?' ಎಂದು ಬೇಂದ್ರೆಯವರಿಗೆ ಮರುಪ್ರಶ್ನೆ ಹಾಕಿದ. ಬೇಂದ್ರೆಯವರ ಉತ್ತರ ಅಷ್ಟೇ ತೀವ್ರವಾಗಿ ಹೊರಬಂತು. – "ಎಂ.ಎ. ಪಾಸಾಗೋದು ಅದೇನ್ ಮಹಾನೋ, ಉಂಡ ಮ್ಯಾಲ ಹೇಲ್ದಂಗ ಇರ್ತಿಯಿನು, ನೀನು..... ಆಂ".

ಬೇಂದ್ರೆಯವರ ಉತ್ತರ, ಇನ್ನೆರಡು ಮೂರು ತಿಂಗಳಲ್ಲೇ 'ಎಮ್ಮೇ' ಪಡೆಯಲಿದ್ದ ಕ್ರೋಚೆಯ ಬಾಯಿಯನ್ನು ಬಲವಾಗಿ ಮುಚ್ಚಿಸಿತ್ತು. ಅವನ ಕಾಲುಗಳು ಮೌನವಾಗಿ ನನ್ನನ್ನು ಹಿಂಬಾಲಿಸಿದ್ದವು.

# ನಂಬಿ ಕೆಟ್ಟವರಿಲ್ಲ ಗೋವಿಂದ

**ವಿಜಯಾ ಸಚ್ಚಿದಾನಂದ್**

"ಗಂಗ ಮನೇಲಿ ಅಮೃತ ಬರ್‍ತಿದೆಯಂತೆ! ದೇವರ ಪಟದಿಂದ ಧಾರಾಕಾರವಾಗಿ ಸುರಿಯುತ್ತಿದೆಯಂತೆ!" ಬಡಾವಣೆಯಲೆಲ್ಲಾ ಸುದ್ದಿ. ಕೆಲವರು ನಂಬಿದರು. ಕೆಲವರು ನಂಬಲಿಲ್ಲ. ನಂಬದೇ ಇದ್ದೋರು ನಂಬಿದವರನ್ನ ಹಾಸ್ಯ ಮಾಡೋದಕ್ಕೇಂತ ಹೋಗಿ ನೋಡಿದರು. ನಂಬಿದವರಂತೂ ಬಿಟ್ಟೇ ಬಿಡಿ! ಅಂತೂ ಗಂಗಾ ಮನೆ ಒಳ್ಳೇ ಯಾತ್ರಾಸ್ಥಳದಂತೆ. ನಂಬಿದೇಯಿದ್ದೋರೆಲ್ಲಾ ಆಮೇಲೆ ನಂಬಿದ್ರೂ ಅಂತ ಸುದ್ದಿ.

"ಚಂದನದ ತಿಲಕ, ತುಳಸೀಮಣಿ ಮಾಲೆ, ಶಾಂತ ಮುದ್ರೆಯಲ್ಲಿ ಒಳ್ಳೇ ದೇವಿ ತರಹ ಕಾಣ್ತಾಳೆ, ಗಂಗಾ" ಅಂತ ಎಲ್ಲರ ಬಾಯಲ್ಲೂ. ಅವಳ ಗಂಡ ಫೂಕನ್ ಸಹ ಹಾಗೇನೆ (ಇದುವರೆಗೂ ಅವನನ್ನು ಯಾರೂ ನೋಡೇಯಿರಲಿಲ್ಲ) ಆಹಾ! ಎಂತಹ ದೈವೀ ಕಳೆ ಇವರ ಮುಖದಲ್ಲಿ!" ಅಂತ ಊರಿಗೆ ಊರೇ ಅನ್ನುತ್ತಿತ್ತು.

ಗಂಗಾ ಯಾರು ಅಂತ ಕೇಳಿದ್ರಾ. ಅವ್ಳು ಓದು ಬರಹ ಬಾರದ ಮುಗ್ಧ ಹಳ್ಳಿ ಹೆಂಗಸು. ನಮ್ಮ ಬಡಾವಣೆಯಲ್ಲಿ ನಾಲ್ಕೈದು ಮನೆಯಲ್ಲಿ ಕೆಲಸ ಮಾಡೋಕ್ಕೆ ಬರೋಳು. ಆವಾಗ ಅವಳನ್ನ ನಾವೆಲ್ಲಾ ನೋಡಿದ್ದುದ್ದು. ಕೆಲವು ಬಾರಿ ನಮ್ಮ ಬಡಾವಣೆಲಿ ನಡೀತಿದ್ದ ಭಜನೆಗೂ ಬಂದು ಕೂತ್ಕೊತಾಯಿದ್ದಿದ್ದನ್ನು ನಾನೇ ನೋಡಿದ್ದೆ. ಎಲ್ಲೊ ಹಿಂದಿನ ಸಾಲಿನಲ್ಲಿ ಕೂತ್ಕೋತಾಯಿದ್ದು. ಅವಳ ಗುಡಿಸಲು ನಮ್ಮ ಬಡಾವಣೆ ಹತ್ರದಲ್ಲಿದ್ದ ಒಂದು ಕೊಳಚೆ ಪ್ರದೇಶದಲ್ಲಿತ್ತು.

"ಆ ಪರಮಾತ್ಮನ ಮನಸ್ಸು ಯಾರಿಗೆ ತಾನೇ ಅರ್ಥವಾಗುತ್ತದೆ?" ಅಂತ ತಮ್ಮ ಮನೇನ ಭಜನೇಗೆ ಸಂಜೆ ಹೊತ್ತು ಬಿಟ್ಟು ಕೊಡುತ್ತಿದ್ದ ಹಿರಿಯ ಅಧಿಕಾರಿಗಳು ಕಳಕಳಿಯಿಂದ ಕೇಳಿದರು. ಪಂಚಭಕ್ಷ್ಯ ಪರಮಾನ್ನವನ್ನು ಕಡೆಗಣಿಸಿ ಕುಚೇಲನ ಅವಲಕ್ಕಿಯನ್ನು ಪ್ರೀತಿಯಿಂದ ಸ್ವೀಕರಿಸಿದವನಲ್ಲವೆ ಅವನು? ಬನ್ನಿ! ಅವನ ಕುಟೀರವನ್ನು ಪವಿತ್ರ ಮಂದಿರವನ್ನಾಗಿ ಮಾಡೋಣ. ಅದಕ್ಕಾಗಿ ಇದೋ ನನ್ನ ಪ್ರಥಮ ಕಾಣಿಕೆ ಅಂತ ನೂರು ರೂಪಾಯಿನ ಎರಡು ನೋಟುಗಳನ್ನು ತಟ್ಟೆಯಲ್ಲಿ ಹಾಕಿದರು. ಸರಿ! ಬಡಾ ಸಹೇಬ್ರು ಚಂದಾ ಕೊಟ್ರೂಂದ್ರೆ ಸಣ್ಣ ಸಾಹೇಬ್ರುಗಳು ಬಿಡ್ತಾರ್‍ಯೆ? ಎಲ್ಲಾರೂ ಧಾರಾಳವಾಗಿ ಚಂದಾ ಕೊಡೋರೆ. ಅದಷ್ಟು ಬೇಗ ಗಂಗಾಳ ಗುಡಿಸಿಲನ್ನು ಪವಿತ್ರ ಮಂದಿರವಾಗಿಸುವ ಪಣ ತೊಟ್ಟರು.

"ಏನೊಂದ್ರೆ! ಭಜನೆ ಮಾಡೋಣ ಅಂತ ನೀವು ಸಲಹೆ ಕೊಟ್ಟಿದ್ದು. ಹಣ್ಣು ಹಂಪಲೂಂತ ಹೆಚ್ಚಿಗೆ ಖರ್ಚೆಲ್ಲಾ ನಮ್ದು. ಬಂಗ್ಲೆ ನಮ್ದು. ಆದ್ರೆ ಅಮೃತ ಸುರೀತಿರೋದು ಆ ಗಂಗನ ಮನೇಲಿ. ಅದೇನು ದೇವ್ರಿಗೆ ಅಷ್ಟು ಕಣ್ಬೇಡ್ವೆ. ಸಾಕಿನ್ನು

ನೀವು ಚಂದಾ ಕೊಟ್ಟಿದ್ದು. ಕಂಡೂ ಕಂಡೂ ಆ ಕೊಳಚೆ ಪ್ರದೇಶದಲ್ಲಿ ಅವತರಿಸ್ಬೇಕೇದು ದೇವ್ರು'' ಅಂತ ಅರ್ಧಕೋಪ ಅರ್ಧ ವಯ್ಯಾರದಿಂದ ಸುಡಿದಿದ್ದರು ಹಿರಿಯಧಿಕಾರಿಗಳ ಅರ್ಧಾಂಗಿ.

ಒಬ್ಬ ಚೀನಾ ದೇಶದ ಚಕ್ರವರ್ತಿ ಇದ್ನಂತಲ್ಲಾ. ಅವನಿಗೆ ಒಂದು ರತ್ನ ಖಚಿತವಾದ ಕೋಗಿಲೆ ಕೊಡ್ತಾರಂತೆ. ಅದು 'ಕುಕ್ಕೂ ಕುಕ್ಕೂ' ಅಂತ ಕೂಗೋದಂತೆ. ಆ ಕೂಗು ಜನಗಳಿಗೆ ಎಷ್ಟು ಇಷ್ಟ ಆಯ್ತಂತೇಂದ್ರೆ ಒಬ್ಬೊಬ್ರನ್ನ ಒಬ್ರು ಮೀಟ್ ಮಾಡಿದ್ರೆ 'ಕುಕ್ಕೂ' ಅನ್ನೋರಂತೆ. ಒಬ್ರನ್ನೊಬ್ರು ತೊರೆದು ಹೋಗುವಾಗ 'ಕೂಕ್ಕೂ' ಅನ್ನೋರಂತೆ. ಏನ್ಮಾತಾಡ್ಬೇಕಾದ್ರೂ 'ಕುಕ್ಕೂ' ಹಾಗೆ ಈಗ ನಮ್ಮ ಬಡಾವಣೆಯಲೆಲ್ಲಾ. ಗಂಡಸ್ರೆಲ್ಲಾ ಆಫೀಸಿಗೆ ಹೋಗ್ಬೇಕಾದ್ರೆ ಗಂಗಾ ಮನೆ. ಹೆಂಗಸ್ರು ಮಾರ್ಕೆಟಿಂಗ್ ಮಾಡ್ಬೇಕಾದ್ರೆ ಗಂಗಾ ಮನೆ. ಮಕ್ಕಳು ಸ್ಕೂಲು ಕಾಲೇಜಿಗೆ ಹೋಗೋವಾಗ ಗಂಗಾ ಮನೆ. ಅವಳೂ ಅಷ್ಟೆ – ಯಾರು ಹೋಗ್ಲಿ – ಭಕ್ತಿಯಿಂದ ಪೂಜೆ ಮಾಡಿ, ಮಣಿದು ಶಂಖ ಊದಿ ಮಂಗ್ಳಾರ್ತಿ ಮಾಡೋಳು. ತೀರ್ಥಪ್ರಸಾದ ಕೊಟ್ಟು ಆಮೇಲೆ ಭಕ್ತಿಯಿಂದ ಫೋಟೋದಿಂದ ಅಮೃತ ತೆಗೆದು ಕೊಡೋಳು. ಭಕ್ತರೂ ಭಕ್ತಿಯಿಂದ ನಮಸ್ಕರಿಸಿ ಧಾರಾಳವಾಗಿ ದಕ್ಷಿಣೆ ಹಾಕಿ ಭಗವಂತನ್ನ ತೃಪ್ತಿ ಪಡಿಸಿ ವಾಪಸ್ಸಾಗ್ತಿದ್ರು.

ಪವಿತ್ರ ಮಂದಿರಕ್ಕಾಗಿ ಚಂದಾ ಪೆಟ್ಟಿಗೆ ತುಂಬ್ತಾ ಇತ್ತು.

ನಮ್ಮ ಮನೆಯಿಂದ ಮೂರನೆ ಮನೆ ಶ್ರೀಮಾನ್ ಬುದ್ಧದೇವ ಸೇನ್‌ರದ್ದು. ಅವರ ಪತ್ನಿ ಮಾಲತಿ ಸೇನ್ ಮತ್ತು ಮಗ'ಮೊಂಟೂ' ಅವನಿಗೆ ಸುಮಾರು 10 ವರ್ಷ ವಯಸ್ಸು. ಮಹಾ ಪಿಡುಗು. ಅವನ ಒಲವೆಲ್ಲಾ ವಿಜ್ಞಾನದ ಕಡೆಗೆ. ಸೈನ್ಸ್ ಕ್ವಿಜ್‌ನಲ್ಲಂತೂ ಬೇಕಾದಷ್ಟು ಪ್ರೈಜುಗಳನ್ನು ಗೆದ್ದಿದ್ದನಂತೆ. ಕ್ವಿಜ್ ಮಾಸ್ಟರು ಪ್ರಶ್ನೆಗಳನ್ನ ಮುಗಿಸೋದಕ್ಕೆ ಮೊದಲೇನೆ ಮೊಂಟೂ ಉತ್ತರಗಳು ರೆಡಿಯಾಗಿರ್‍ತಿದ್ದವಂತೆ. ಕೆಲವು ಮಕ್ಕಳು ಪ್ರಶ್ನೆ ಅರ್ಥವಾಗಿದ್ರೂನೂ 'Question, Please' ಅಂತ time gain ಮಾಡೋದಕ್ಕೆ ಕೇಳ್ತಾರಲ್ಲಾ ಆ ಬಾಬ್ತೆಲ್ಲಾ ಇಲ್ವೇ ಇಲ್ವಂತೆ. ಇದ್ಯಾಕ್ಹೀಗೆ, ಅದ್ಯಾಕ್ಹಾಗೆ ಅಂತ ಒಂದು ಇಪ್ಪತ್ತ್ನಾಲ ಅವರ ಅಪ್ಪ ಅಮ್ಮನ ಎಲ್ಲಾ ವಿಷಯವಾಗಿ ಪ್ರಶ್ನೆ ಮಾಡಿ ಬೇಜಾರು ಮಾಡೋನಂತೆ. ಅವರಮ್ಮನ ಜೊತೆ ಗಂಗಾ ಮನೆಗೂ ಹೋಗಿದ್ನಂತೆ. ಪ್ರಸಾದಾನು ತೊಗೊಂಡಿದ್ನಂತೆ.

"ಅಮ್ಮ! ಅದ್ಹೇಗೆ ಪಟದಿಂದ ಜೇನುತುಪ್ಪ ಬರುತ್ತೇ" ಅಂತ ಕೇಳಿದ್ನಂತೆ.

"ನಿಂಗ್ಯಾಕೆ ಅದೆಲ್ಲ. ಸುಮ್ನಿರು! ದೇವರ ವಿಷ್ಯ ಏನೂ ಮಾತಾಡ್ಬೇಡ" ಅಂತ ಅವರಮ್ಮ ಅಂದ್ಬಿಟ್ನಂತೆ.

"ಹಾಗೆಲ್ಲಾ ಆಗೋದಕ್ಕೆ ಸಾಧ್ಯಾನೇಯಿಲ್ಲ"! ಅಂತ ಒತ್ತಿ ಹೇಳಿದಕ್ಕೆ ಅವರಮ್ಮ "ಅಯ್ಯೋ! ಚಂಡಾಲ! ಹಾಗೆಲ್ಲಾ ಅನ್ಬೇಡ್ವೋ! ಒಂದು ಚೂರು ಭಯ ಭಕ್ತಿಯಿಲ್ಲಲ್ಲೋ ನಿಂಗೆ. ಮಾದುರ್ಗಾ! ಮಾಕಾಳಿ! ನನ್ನ ಮಗನ ತಪ್ಪನ್ನ ಕ್ಷಮಿಸಮ್ಮ!" ಅಂತ ಕೆನ್ನೆ ಹೊಡ್ಕೊಂಡು ದೇವರ ಕ್ಷಮೆ ಕೇಳಿದ್ಲಂತೆ.

ಒಂದು ಸತಿ ಅಲ್ಲಿಗೆ ಹೋದಾಗ ದೇವರ ಪಟದ ಹತ್ತಿರ ಹೋಗಿ ನಿಂತ್ಕೊಂಡ್ನಂತೆ. ಆಗ ಪೀಕನ್ "ಕೀ ಹೋಲೋ! ಕೀ ಹೋಲೋ ಅಂತ ಇವನ ಹತ್ರ ಬಂದು ಜೋರಾಗಿ ಕೇಳಿದನಂತೆ! (ಅದೇನು ಹಿಂದಿಯ ಅಪಭ್ರಂಷವಲ್ಲ! ಬೆಂಗಾಲಿ ಭಾಷೆಲಿ 'ಏನಾಯ್ತೂಂತೆ ಅಷ್ಟೇ!)

ಆದರೂ ಆ ಪುಟ್ಟ ಮನಸ್ಸಿಗೇ ಕಿರಿಕಿರಿ.

ಅಂದು ಬೆಳಗ್ಗೆ ಸುಮಾರು 6.30 ಗಂಟೆ ಇರ್ಬೇಕು. ಜೋರಾಗಿ ಗಲಾಟೆ ಕೇಳ್ತಾಯಿದೆ. ಸೆನ್ ಮನೆಯಿಂದ. ಮಾಲತಿ ಅಳ್ತಾಯಿದ್ದಾರೆ. ಶ್ರೀ ಬುದ್ಧದೇವ ಶಥ ಪಥ ತಿರುಗುತ್ತಾಯಿದ್ದಾರೆ. ಏನಪ್ಪಾಂದ್ರೆ? ಬೆಳಗ್ಗೆ 6ಗಂಟೆಗೆ ಮಾಲತಿ ಎದ್ದು ಮೊಂಟೂನ ಎಬ್ಸೋಣ ಅಂತ ನೋಡ್ತಾರಂತೆ ಅವನು ಹಾಸಿಗೆ ಮೇಲೆ ಇಲ್ವೇ ಇಲ್ಲ. ಇವತ್ತೇನೋ ಯಾರೂ ಎಬ್ಬಸ್ದೆ ಬೇಗ ಎದ್ದಿಟ್ಟಿದ್ದಾನಲ್ಲಾ ಅಂತ ಆಶ್ಚರ್ಯವಾಯ್ತಂತೆ. ಆದ್ರೆ ಮನೇಲೆಲ್ಲೂ ಕಾಣ್ಲೇ ಇಲ್ವಂತೆ. ಮುಂದಿನ ಬಾಗ್ಲು ಬೇರೆ ತೆಗೆದೇಯಿತ್ತಂತೆ. "ನನ್ಮಗ ಮನೆ ಬಿಟ್ಟು ಎಲ್ಲೊ ಹೊರಟ್ಹೋಗಿದ್ದಾನೆ" ಅಂತ ಜೋರಾಗಿ ಗಂಟ್ಲು ಮಾಡಿ ಬಡ್ಕೊತಾಯಿದ್ರು.

ಬರಿ ಗಾಬರಿ ಪಟ್ಟಿದ್ದರು ಅಷ್ಟೇ ಗಂಡ ಹೆಂಡ್ತಿ. ಸುಮಾರು 8 ಗಂಟೆ ಹೊತ್ತಿಗೆ ಮನೆಗೆ ವಾಪಸ್ಸು ಬಂದ 'ಮೊಂಟೂ'. ಸಮಾಧಾನದ ಉಸಿರು ಎಳೆದರೂ ಸಹ ಒಂದು ತರಹ ಧ್ವನಿ ಎತ್ತರಿಸಿ "ಎಲ್ಲಿ ಹಾಳಾಗ್ಹೋಗಿದ್ದೆ" ಅಂತ ಕೇಳಿದ್ರಂತೆ.ಆಗಿದ್ದು ಹೀಗೆ. ಆ ಪುಟ್ಟ ವಿಜ್ಞಾನಿ ಮನಸ್ಸಿನಲ್ಲಿ ಒಂದು ತರಹ ಕಿರಿಕಿರಿ ಇದ್ದೇ ಇತ್ತಲ್ಲಾ. ಅವತ್ತು ಬೆಳಗ್ಗೆ ಬೇಗ ಎಚ್ಚರವಾಯ್ತಂತೆ. ಸರಿ! ಆ ಮನಸ್ಸಿನಲ್ಲಿ ಜೇನುತುಪ್ಪದ ವಿಷಯ ಎಲ್ಲಿ ಕೂತಿತ್ತೊ ತಕ್ಷಣ ಕಾಡೋದಕ್ಕೆ ಶುರುವಾಯ್ತಂತೆ. ತಡ್ಕೋಕ್ಕೇ ಆಗ್ಲಿಲ್ಲವಂತೆ. ಅಪ್ಪ ಅಮ್ಮನಿಗೆ ಹೇಳೋಕ್ಕೆ ಹೋದ್ರೆ ಬೈಸಿಕೊಳ್ಳೋದು ಗ್ಯಾರಂಟೀಂತ ಯಾರಿಗೂ ಹೇಳ್ದೆ ಧೈರ್ಯ ಮಾಡಿ ಒಬ್ನೇ ಹೊರಟ್ಬಿಟಂತೆ. ಅವಾಗ ಗಡಿಯಾರದ ಕುಕ್ಕೊ ನಾಲ್ಕು ಸತಿ ಕೂಗ್ತಂತೆ. ಅಂದ್ರೆ ಬೆಳಗಿನ ಜಾವ ನಾಲ್ಕು ಗಂಟೆ. ರಸ್ತೆಲೆಲ್ಲಾ ಕತ್ಲು. ಹಾಗೂ ಹೀಗು ಕೊಳಚೆ ಪ್ರದೇಶ ತಲಪಿದ. ಯಾವ ಗುಡಿಸಿಲಲ್ಲೂ ಬೆಳಕಿರಲಿಲ್ಲವಂತೆ. ಸ್ವಲ್ಪ ಹೊತ್ತು ಹಾಗೆ ಕೂತ್ಕೋಳ್ಳೋಣಾಂತ ಒಂದು ಇಟ್ಟಿಗೆ ರಾಶಿ ಮೇಲೆ ಕೂತುಕೊಂಡ. (ಇಟ್ಟಿಗೆ, ಮರಳು ರಾಶಿ ಎಲ್ಲಾ ಅಲ್ಲೇ ಇತ್ತಲ್ಲ ಪವಿತ್ರ ಮಂದಿರಕ್ಕೋಸ್ಕರ)



ಮೊದಲು ದೀಪ ಕಂಡಿದ್ದು ಗಂಗನ ಮನೇಲಿ. ಇನ್ನೆಲ್ಲಿ ಫೂಕನ ಹೊರಕ್ಕೆ ಬಂದು ತನ್ನ ನೋಡ್ಬಿಡ್ತಾನೋ ಅಂತ ಭಯವಾಯ್ತಂತೆ. (ಕೀ ಹೋಲೋಂತ ಅವತ್ತು ಕೂದ್ಗಾಗ್ನಿಂದ ಅವನೂಂದ್ರೆ ಒಂದು ತರಹ ಭಯ) ಆದ್ರೆ ಯಾವಾಗ ಯಾರೂ ಬರಲಿಲ್ಲ ಸ್ವಲ್ಪ ಧೈರ್ಯ ಬಂತು. ನಿಧಾನವಾಗಿ ಹೋಗಿ ತಡಕೆ ಸಂದಿಯಿಂದ ಕದ್ದು ಒಳಗೆ ನೋಡದ್ನಂತೆ. ಗುಡಿಸಿ ಸಾರಸಿ ರಂಗೋಲಿ ಹಾಕಿದ್ರಂತೆ. ಕೆಳಗೆ ಒಂದು ಶೀಶೆ ಇತ್ತಂತೆ. ಅದರ ಬಿರಟೆ ತೆಗೆದು ಪಟದ ಮೇಲೆಲ್ಲಾ ಏನೋ ಸುರದ್ರಂತೆ. ಆಮೇಲೆ ಪಟದ ಆಕಡೆ ಈಕಡೆ ಎರಡು ಕರ್ಟನ್ ರಿಂಗುಗಳಿರೊಲ್ಲವೆ ಹಾಗೆ ಎರಡು ರಿಂಗಿತ್ತಂತೆ. ಅದಕ್ಕೆ ಬಿರಟೆ ಸಮೇತದ ಎರಡು ಶೀಶೆ ಸಿಕ್ಕಿಸಿದನಂತೆ ಫೂಕನ್. ಗಂಗಾ ದಪ್ಪ ಚಂಡು ಹೂವಿನ ಹಾರ ಪಟಗಳ ಮೇಲೆ ಹಾಕಿದ್ಲಂತೆ ಜೋಪಾನವಾಗಿ ಶೀಶೆಗಳು ಕಾಣಿಸದ ಹಾಗೆ. ಆಮೇಲೆ ಶಂಖ ಇಟ್ಲು ನಂದಾದೀಪ ಹಚ್ಚಿದಳು. ದೇವರ ಮನೆ ತಯಾರಾಯ್ತು. ಇಷ್ಟೆಲ್ಲಾ ಆಗೊವಾಗ ಇಬ್ರೂ ಒಂದಕ್ಷರ ಮಾತಿಲ್ಲ! ಒಂದು ಸ್ವಲ್ಪವೂ ಗದ್ದಲವಿಲ್ಲ. ಜೋರಾಗಿ ಶಂಖ ಊದಿ

ಬಾಗಿಲು ತೆಗೆದಳಂತೆ. ನೋಡ್ತಾ ನೋಡ್ತಾ ಮೊಂಟು ಎದೆ ಡವ ಡವ ಹೊಡ್ಕೊಳ್ಳಕ್ಕೆ ಶುರುವಾಯ್ತು.

ಅರ್ಥವಾಗ್ಹೋಯ್ತು ವಿಜ್ಞಾನಿಗೆ ಅಮೃತ ರಹಸ್ಯ! ಸ್ವಲ್ಪ ಹೊತ್ತಿನ ಮೇಲೆ ಭಕ್ತಾದಿಗಳು ಬರಲು ಶುರು ಮಾಡಿದರು. ಇವನೂ ಅವರ ಜೊತೆ ಸೇರ್ಕೊಂಡು ಒಳಗೆ ಹೋಗಿ ನಮಸ್ಕರಿಸಿ ಬರೋ ಹೊತ್ತಿಗೆ ಇಷ್ಟೋತ್ತು.

"ಏಯ್! ತಲೆಹರಟೆ! ಯಾರಿಗೂ ಹೇಳ್ಬೇಡ ನೀನು ನೋಡಿದ್ದನ್ನ. ನಿನ್ನನ್ಯಾರು ಅಲ್ಲಿಗೆ ಹೋಗೂಂದ್ರೂ. ಯಾರಿಗಾದರೂ ಹೇಳಿದ್ದು ಗೊತ್ತಾದ್ರೆ ನಿನ್ನ ಸಿಗಿದು ಹಾಕ್ಬಿಡ್ತೀನಿ" ಅಂತ ಗರ್ಜಿಸಿದರಂತೆ. ಯಾಕೇಂದ್ರೆ ಬಡಾ ಬಾಸ್‌ನ ಸಹವಾಸ! ಯಾರಿಗೆ ಗೊತ್ತು ಏನಾಗುತ್ತೇಂತ?

ಅವರೆಷ್ಟು ಬೇಡಾಂದ್ರೂ, ಮೊಂಟು ಯಾರ ಮುಂದೂ ಬಾಯಿ ಬಿಡ್ಲಿಲ್ಲಾಂದ್ರೂ ಅದು ಹೇಗೋ ಕೆಲವೇ ದಿನಗಳಲ್ಲಿ ಎಲ್ಲಾ ಕಡೆಗೂ ಹರಡಿ ಬಿಟ್ಟಿತು.

ನನ್ನ ಕೈಯಿಂದಾನೂ ಸುಮಾರು ಆ ಹರಕೆ ಈ ಹರಕೇಂತ ಮುನ್ನೂರು ನಾನ್ನೂರು ರೂಪಾಯಿ ಖರ್ಚಾಗಿತ್ತು. ಅತ್ತೇ ಮೇಲೆ ಕೋಪ ಕೊತ್ತೀ ಮೇಲೆಂತ ನಮ್ಮನೆ ಕೆಲ್ಸದ ಮಾಲ್ತೀ ಮೇಲೆ ತೆಗೆದೆ.

"ಏನೇ ಮಾಲತಿ! ನಾಚ್ಕೆ ಬೇಡ್ವೇನೆ ಹಾಗೆಲ್ಲಾ ದೊಡ್ಡೋರನ್ನ ಮೋಸ ಮಾಡೋಕ್ಕೆ! ಥೂ ಅಸಹ್ಯ! ಎಂಥ ಕಚ್ಚಡ ಜನಾನೇ ನೀವು. ದೇವ್ರನ್ನೂ ಸುಮ್ನೆ ಬಿಡೋಲ್ವಲ್ಲ! ಆಮೇಲೆ ಇದ್ಯಲ್ಲಾ ಮಾತೃಭಾಷೆ ಬೈಗಳಗಳು.

"ದೀದೀ! ಅಷ್ಟಷ್ಟು ದಪ್ಪ ಪುಸ್ತಕಗಳು ಓದ್ತೀರಿ? ಅಷ್ಟು ದೊಡ್ಡ ಆಫೀಸಿನಲ್ಲಿ ಕೆಲ್ಸ ಎಲ್ಲಾ ಮಾಡ್ತೀರಿ. ಅಷ್ಟು ಗೊತ್ತಾಗ್ಲಿಲ್ವೇ ನಿಮಗೆಲ್ಲಾ" ಅಂತ ನನಗೇ ಸವಾಲು ಹಾಕಿದ್ದಳು.

"ಎಲ್ಲಿ ಆ ರ್‍ಯಾಸ್ಕಲ್ ಫೂಕನ್, ಎಲ್ಲಿ ಆ ಬದ್‌ಮಾಷ್ ಔರತ್ ಗಂಗಾ? ನನ್ನ ಗನ್ ತೊಗೊಂಡು ಶೂಟ್ ಮಾಡ್ಬಿಡ್ತೀನಿ ಇಬ್ರನ್ನೂ. ಪೋಲಿಸ್‌ಗೆ ಹಿಡ್ದು ಕೊಟ್ಬಿಡ್ತೀನಿ" ಅಂತೆಲ್ಲಾ ಕೂಗಾಡ್ತಿದ್ರಂತೆ ಹಿರಿಯಧಿಕಾರಿಗಳು. ವಾಕಿಂಗ್ ಹೋಗ್ತಿದ್ದಾಗ ಆಫೀಸ ಫ್ಯೂನ್ ಸಿಕ್ಕಿ ಹೇಳ್ದ.

---

ಯುಗಾದಿ ಸಂಚಿಕೆಗೆ ಜಾಹಿರಾತುಗಳನ್ನು ನೀಡಿ ಪ್ರೋತ್ಸಾಹಿಸಿದ ಕೆಳಗಿನ ಎಲ್ಲ ಸಂಸ್ಥೆಗಳಿಗೆ ಅಪರಂಜಿಯ ಹಾರ್ದಿಕ ಕೃತಜ್ಞತೆಗಳು.


| | ಪುಟ |
|---|---|
| ಇಂಟೆರೆಕ್ಸ್ ಇಂಡಿಯಾ | 1 |
| ಕೆನರಾಬ್ಯಾಂಕ್ | 2 |
| ಶೇಷಾದ್ರಿ ಅಂಡ್ ಕೋ | 3 |
| ಮೆಟಲ್ ಪವರ್ | 4 |
| ಪಾರ್ಕ್‌ವ್ಯೂ ಪಂಟರ್ಸ್; ರಘು ಮೆಡಿಕಲ್ ಸ್ಟೋರ್ಸ್ | 24 |
| ಸನ್ ಫ್ಯಾಷನ್; ಮಂಟಪ್ ಐಸ್ ಕ್ರೀಮ್ಸ್ | 30 |
| ಎನ್‌ಗಲ್ಫ್; ಬೆಂಗಳೂರು ಟೂಲ್ಸ್ | 34 |
| ಪ್ರವೀಣ್ ಮೆಟಲ್ ಕಾರ್ಪೊರೇಷನ್; ಅವ್‌ಮೆಕ್ | 38 |
| ವೈಶ್ಯ ಬ್ಯಾಂಕ್ | 46 |
| ಕೆ.ಎಲ್.ಎಮ್ ಪ್ರಿಸಿಷನ್ ಇಂಜಿನಿಯರ್ಸ್ | 60 |
| ಶ್ರೀನಿಧಿ ಇಂಡಸ್ಟ್ರೀಸ್, ಶ್ರೀ ಭಾಸ್ಕರ್ ಇಂಡಸ್ಟ್ರೀಸ್ | 74 |
| ವಿಟಾ ಪಂಪ್ಸ್; ನವೀನ್ ರಬ್ಬರ್ಸ್ | 82 |
| ಸ್ಟಂಪ್ ಶೂಲೆ; ನೇತ್ರಾ; ರಾವೆಲ್ ಎಂಡ್ ಬ್ರದರ್ಸ್ | 88 |
| ಆರ್. ಎಸ್.ಎಮ್ ಇಂಡಸ್ಟ್ರೀಸ್; ಸಿಸ್ಟಮ್ ಸಿನರ್ಜಿ | 108 |
| ಅಲಾಯ್‌ಸ್ಟೀಲ್ ಇಂಡಸ್ಟ್ರೀಸ್; ಪ್ರೈಮ್ ಮೂವರ್ಸ್ | 116 |
| ಕರೋಲ್ | 128 |
| ಎಸ್.ವಿ. ಆರ್. ಏಜನ್ಸೀಸ್ | 132 |
| ವಿಜಯ್ ಸ್ಫೆರಾಯಿಡಲ್ಸ್ | 150 |
| ಫೈನ್ ಕ್ರಾಫ್ಟ್ಸ್ | 151 |
| ಮಲ್ಲಾನೀಸ್ | 152 |
| ಕ್ವಾಲಿಟಿ ಐಸ್‌ಕ್ರೀಮ್ಸ್ | 153 |
| ಆರ್.ವಿ. ಅಪಾರ್ಟ್‌ಮೆಂಟ್ಸ್ | 154 |
| ಶ್ರೇಯಸ್ ಬಿಲ್ಡರ್ಸ್ | 155 |
| ಟಿಕ್ನೊ ಆರ್ಟ್ ಕಂಸ್ಟ್ರಕ್ಷನ್ಸ್ | 156 |
| ರವಿ ಗ್ರಾಫಿಕ್ಸ್ | 157 |
| ಹಿಂದೂಸ್ಥಾನ್ ಇಂಜಿನಿಯರ್ಸ್; ಪವರ್ ಇಂಜಿನಿಯರಿಂಗ್ | 158 |
| ಎಸ್.ವಿ. ರಂಗಸ್ವಾಮಿ ಎಂಡ್ ಕೋ. | ಮುಂದಿನ ಒಳ ಹೊದಿಕೆ |
| ಮಾಸ್ಕಾಟ್ ಅಗ್ರೋ ಕೆಮಿಕಲ್ಸ್ | ಹಿಂದಿನ ಒಳ ಹೊದಿಕೆ |
| ಯು ಐ ಪ್ಲಾಸ್ಟ್ | ಹೊರಹೊದಿಕೆ |

Printed by V.R. NATH for the Publisher M. SHIVAKUMAR, Published and owned by M. SHIVA KUMAR, 36, 6th Main Road, Malleswaram, Bangalore-560 003. Printed at IMPRESSIONS, 404, Sampige Road, Malleswaram, Bangalore-560 003. Editor : M. SHIVAKUMAR.